WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೭ | ಬೆಂಗಳೂರು, ಗುರುವಾರ, ಮಾರ್ಚ್ ೮, ೨೦೧೨ (ಫಾಲ್ಗುಣ ೧೮, ಶಕ ವರ್ಷ ೧೯೩೩) | ಸಂಚಿಕೆ ೧೦ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ಸಂಖ್ಯೆ: ವಾಕೈ 144 ಕೈಸೇವಿ 2008. ಬೆಂಗಳೂರು, ದಿನಾಂಕ: 11.01.2012**

**ತಿದ್ದುಪಡಿ**

ಸರ್ಕಾರದ ಆದೇಶ ಸಂಖ್ಯೆ: ವಾಕೈ/144/ಕೈಸೇವಿ/2008 ದಿನಾಂಕ 14.12.2011 ರ ಆದೇಶ ಭಾಗದ ಕಂಡಿಕೆ 2 ರಲ್ಲಿ ನಮೂದಾಗಿರುವ "ಉಪ ನಿರ್ದೇಶಕರು, (ಖಾಗ್ರಾ), ಬೆಂಗಳೂರು ನಗರ ಜಿಲ್ಲಾ ಪಂಚಾಯತ್, ಇವರನ್ನು ಮಂಡನಾಧಿಕಾರಿಯನ್ನಾಗಿ ಮುಂದುವರೆಸಿ ನೇಮಿಸಿದೆ" ಎಂಬುದರ ಬದಲಾಗಿ "ಉಪ ನಿರ್ದೇಶಕರು (ಖಾಗ್ರಾ), ಬೆಂಗಳೂರು ಗ್ರಾಮಾಂತರ ಜಿಲ್ಲಾ ಪಂಚಾಯತ್, ಇವರನ್ನು ಮಂಡನಾಧಿಕಾರಿಯನ್ನಾಗಿ ಮುಂದುವರೆಸಿ ನೇಮಿಸಿದೆ" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಲ್.ಎಸ್ ವಾಸನ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 377 ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ. (ಸೇವೆಗಳು)

### ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಉಡುಪಿ ಜಿಲ್ಲೆ, ಕಾರ್ಕಳ ತಾಲ್ಲೂಕು, ಇನ್ನಾ ಗ್ರಾಮದ ಕಲ್ಲಕಟ್ಟ ಎಂಬಲ್ಲಿ ಕಿಂಡಿ ಅಣೆಕಟ್ಟು ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋದನೆ ಬಗ್ಗೆ.

**ಓದಲಾಗಿದೆ :** 1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರುರವರ ಪತ್ರದ ಸಂಖ್ಯೆ:ಮುಸದ/ತಾಂಸ–5–ಸ.ಇಂ.11/ಉ.ಜಿ..ಕುಂ.ತಾ/ಕಲ್ಲಕಟ್ಟ/ಇಪ್ರೊಕ್ಯೂರ್‌ಮೆಂಟ್/ ಟೆಂಡರ್ ಅನುಮೋದನೆ/2011/101, ದಿನಾಂಕ 07.01.2012.

**ಪ್ರಸ್ತಾವನೆ :**

ಉಡುಪಿ ಜಿಲ್ಲೆ, ಕಾರ್ಕಳ ತಾಲ್ಲೂಕು, ಇನ್ನಾ ಗ್ರಾಮದ ಕಲ್ಲಕಟ್ಟ ಎಂಬಲ್ಲಿ ಕಿಂಡಿ ಅಣೆಕಟ್ಟು ನಿರ್ಮಾಣ ಕಾಮಗಾರಿಯ ರೂ. 80.00 ಲಕ್ಷಗಳ ಅಂದಾಜು ಪಟ್ಟಿಗೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರು ಇವರು ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಮಂಗಳೂರು ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಉಡುಪಿ ಜಿಲ್ಲಾ ಟೆಂಡರ್ ಬುಲೆಟಿನ್ | 8–11–2011 |
| ವಿಜಯ ಕರ್ನಾಟಕ ದಿನ ಪತ್ರಿಕೆ | 27–11–2011 |
| ಇಂಡಿಯನ್ ಎಕ್ಸ್‌ಪ್ರೆಸ್ | 27–11–2011 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಇಬ್ಬರು ಗುತ್ತಿಗೆದಾರರು ಭಾಗವಹಿಸಿದ್ದು ಇವರಲ್ಲಿ ಒಬ್ಬರು ಮಾತ್ರ ಅರ್ಹತೆ ಹೊಂದಿದ್ದು, ಇವರ ಆರ್ಥಿಕ ಬಿಡ್ ಅನ್ನು ದಿನಾಂಕ 04–01–2012 ರಂದು ತೆರೆಯಲಾಗಿದ್ದು ವಿವರಗಳು ಕೆಳಕಂಡಂತಿವೆ.

| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ. 79,45,355/– |
|---|---|---|---|---|
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ. 79,55,929/– |
| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| 1. | ರಾಜೇಶ್ ಕಾರಂತ್, 1ನೇ ದರ್ಜೆ ಗುತ್ತಿಗೆದಾರರು | 95,34,368/– | 19.999 ಹೆಚ್ಚು | 19.839 ಹೆಚ್ಚು |

ಮೇಲ್ಕಂಡಂತೆ ಶ್ರೀ ರಾಜೇಶ್ ಕಾರಂತ್, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿದ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 19.839 ರಷ್ಟು ಹೆಚ್ಚಾಗಿರುತ್ತದೆ. ಸದರಿ ಟೆಂಡರನ್ನು ಪರಿಶೀಲಿಸಿ ಪರಿಷ್ಕೃತ ದರಗಳ ಮೇಲೆ ಶೇ. 14.65% ಹೆಚ್ಚಿನ ದರಗಳಿಗೆ ಅಂದರೆ ರೂ. 91,21,473/– ಗಳಿಗೆ ಟೆಂಡರನ್ನು ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 07 ಅಪಿಬಂ 2012 (ತಾಂತ್ರಿಕ), ಬೆಂಗಳೂರು, ದಿನಾಂಕ : 17ನೇ ಜನವರಿ 2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಉಡುಪಿ ಜಿಲ್ಲೆ ಕಾರ್ಕಳ ತಾಲ್ಲೂಕು, ಇನ್ನಾ ಗ್ರಾಮದ ಕಲ್ಲಕಟ್ಟ ಎಂಬಲ್ಲಿ ಕಿಂಡಿ ಅಣೆಕಟ್ಟು ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 79,55,929/–ಗಳ ಮೇಲೆ ಶೇ. 14.65 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 91,21,473/– ಗಳಿಗೆ (ರೂ ತೊಂಬತ್ತೊಂದು ಲಕ್ಷ ಇಪ್ಪತ್ತೊಂದು ಸಾವಿರದ ನಾಲ್ಕು ನೂರ ಎಪ್ಪತ್ತಮೂರು ರೂಪಾಯಿಗಳು ಮಾತ್ರ) ಕಾಮಗಾರಿಯನ್ನು ಶ್ರೀ ರಾಜೇಶ್ ಕಾರಂತ್, 1ನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20–1–2003 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 379 ಜಲ ಸಂಪನ್ಮೂಲ ಇಲಾಖೆ. (ಸಣ್ಣ ನೀರಾವರಿ)

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ದಕ್ಷಿಣ ಕನ್ನಡ ಜಿಲ್ಲೆ, ಬೆಳ್ತಂಗಡಿ ತಾಲ್ಲೂಕು, ಚಾರ್ಮಾಡಿ ಗ್ರಾಮದ ಅರಣೆಪಾದ ಎಂಬಲ್ಲಿ ಕಿಂಡಿ ಅಣೆಕಟ್ಟು (ಬ್ರಿಡ್ಜ್ ಕಂ ಬ್ಯಾರೇಜ್) ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋದನೆ ಬಗ್ಗೆ.

**ಓದಲಾಗಿದೆ :** **1.** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರುರವರ ಪತ್ರದ ಸಂಖ್ಯೆ:ಮುಸದ/ತಾಂಸ–5ಸ.ಇಂ.–11/ದ.ಕ.ಜಿ/ಬೆ.ತಾ/ಅರಣೆಪಾದ/ಇಪ್ರೊಕ್ಯೂರ್‌ಮೆಂಟ್/ ಟೆಂಡರ್ ಅನುಮೋದನೆ/2011/104, ದಿನಾಂಕ 07.01.2012.

**ಪ್ರಸ್ತಾವನೆ :**

ದಕ್ಷಿಣ ಕನ್ನಡ ಜಿಲ್ಲೆ, ಬೆಳ್ತಂಗಡಿ ತಾಲ್ಲೂಕು, ಚಾರ್ಮಾಡಿ ಗ್ರಾಮದ ಅರಣೆಪಾದ ಎಂಬಲ್ಲಿ ಕಿಂಡಿ ಅಣೆಕಟ್ಟು (ಬ್ರಿಡ್ಜ್ ಕಂ ಬ್ಯಾರೇಜ್) ನಿರ್ಮಾಣ ಕಾಮಗಾರಿಯ ರೂ. 80.00 ಲಕ್ಷಗಳ ಅಂದಾಜು ಪಟ್ಟಿಗೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರು ಇವರು ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಮಂಗಳೂರು ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ದಕ್ಷಿಣ ಕನ್ನಡ ಜಿಲ್ಲಾ ಟೆಂಡರ್ ಬುಲೆಟಿನ್ | 8–11–2011 |
| ಟೈಮ್ಸ್ ಆಫ್ ಇಂಡಿಯಾ ದಿನ ಪತ್ರಿಕೆ | 27–11–2011 |
| ಉದಯವಾಣಿ | 27–11–2011 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಬ್ಬರು ಗುತ್ತಿಗೆದಾರರು ಭಾಗವಹಿಸಿದ್ದು ಇವರ ಟೆಂಡರ್ ಅರ್ಹತೆ ಹೊಂದಿದ್ದು, ಇವರ ಆರ್ಥಿಕ ಬಿಡ್ ಅನ್ನು ದಿನಾಂಕ 04–01–2012 ರಂದು ತೆರೆಯಲಾಗಿದ್ದು ವಿವರಗಳು ಕೆಳಕಂಡಂತಿವೆ.

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 77,73,426/– |
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 77,99,114/– |

| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
|---|---|---|---|---|
| 1. | ರಾಜೇಶ್ ಕಾರಂತ್, 1ನೇ ದರ್ಜೆ ಗುತ್ತಿಗೆದಾರರು | 93,28,118/– | 20.00 ಹೆಚ್ಚು | 19.605 ಹೆಚ್ಚು |

ಮೇಲ್ಕಂಡಂತೆ ಶ್ರೀ ರಾಜೇಶ್ ಕಾರಂತ್, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿದ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 19.605 ರಷ್ಟು ಹೆಚ್ಚಾಗಿರುತ್ತದೆ. ಸದರಿ ಟೆಂಡರನ್ನು ಪರಿಶೀಲಿಸಿ ಪರಿಷ್ಕೃತ ದರಗಳ ಮೇಲೆ ಶೇ. 14.60% ಹೆಚ್ಚಿನ ದರಗಳಿಗೆ ಅಂದರೆ ರೂ. 89,37,785/– ಗಳಿಗೆ ಟೆಂಡರನ್ನು ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 10 ಅಪಿಬಂ 2012 (ತಾಂತ್ರಿಕ), ಬೆಂಗಳೂರು, ದಿನಾಂಕ : 17ನೇ ಜನವರಿ 2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ದಕ್ಷಿಣ ಕನ್ನಡ ಜಿಲ್ಲೆ, ಬೆಳ್ತಂಗಡಿ ತಾಲ್ಲೂಕು, ಚಾರ್ಮಾಡಿ ಗ್ರಾಮದ ಅರಣೆಪಾದ ಎಂಬಲ್ಲಿ ಕಿಂಡಿ ಅಣೆಕಟ್ಟು ((ಬ್ರಿಡ್ಜ್ ಕಂ ಬ್ಯಾರೇಜ್) ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 77,99,114/–ಗಳ ಮೇಲೆ ಶೇ. 14.60 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 89,37,785/–ಗಳಿಗೆ (ರೂ ಎಂಬತ್ತೊಂಬತ್ತು ಲಕ್ಷ ಮೂವತ್ತೇಳು ಸಾವಿರದ ಏಳು ನೂರ ಎಂಬತ್ತೈದು ರೂಪಾಯಿಗಳು ಮಾತ್ರ) ಕಾಮಗಾರಿಯನ್ನು ಶ್ರೀ ರಾಜೇಶ್ ಕಾರಂತ್, 1ನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20–01–2003 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 380 ಜಲ ಸಂಪನ್ಮೂಲ ಇಲಾಖೆ. (ಸಣ್ಣ ನೀರಾವರಿ)

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಗುಲ್ಬರ್ಗಾ ಜಿಲ್ಲೆ, ಚಿಂಚೋಳಿ ತಾಲ್ಲೂಕಿನ ದೇಗಲಮಡಿ ಗ್ರಾಮದ ಹತ್ತಿರ ಮುಲ್ಲಮಾರಿ ನದಿಗೆ ಅಡ್ಡಲಾಗಿ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋದಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಸನೀಇ 10 ನಯೋಕಾ 2010 ದಿನಾಂಕ: 27.11.2010.

2. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ: ಮುಇಂ/ಸನೀ(ಉ)/ವ/ಬಿಜೆಪಿ/ಪಿಬಿ–5/2011–12/6295 ದಿನಾಂಕ: 12.12.2011

**ಪ್ರಸ್ತಾವನೆ :**

ಗುಲ್ಬರ್ಗಾ ಜಿಲ್ಲೆ ಚಿಂಚೋಳಿ ತಾಲ್ಲೂಕಿನ ದೇಗಲಮಡಿ ಗ್ರಾಮದ ಹತ್ತಿರ ಮುಲ್ಲಮಾರಿ ನದಿಗೆ ಅಡ್ಡಲಾಗಿ ಬ್ಯಾರೇಜ್ ನಿರ್ಮಾಣ ಕಾಮಗಾರಿ ಅಂದಾಜಿಗೆ ಉಲ್ಲೇಖ (1) ರಲ್ಲಿ ನಮೂದಿಸಿರುವ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಗುಲ್ಬರ್ಗಾ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 29–09–2011 |
| ಜಿಲ್ಲಾ ಟೆಂಡರ್ ಬುಲೆಟಿನ್ | 01–10–2011 |
| ಪ್ರಜಾವಾಣಿ ದಿನಪತ್ರಿಕೆ | 01–10–2011 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಇಬ್ಬರು ಗುತ್ತಿಗೆದಾರರು ಭಾಗವಹಿಸಿದ್ದು ಈ ಪೈಕಿ ಒಬ್ಬರು ಗುತ್ತಿಗೆದಾರರು ಅರ್ಹತೆ ಹೊಂದಿದ್ದು ಇವರ ಆರ್ಥಿಕ ಬಿಡ್ ಅನ್ನು ದಿನಾಂಕ 02.12.2011 ರಂದು ತೆರೆದು ಪರಿಶೀಲಿಸಲಾಗಿದ್ದು ವಿವರಗಳು ಕೆಳಕಂಡಂತಿವೆ.

| | | | | |
|---|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ. 3,58,67,136/– |
| ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ. 3,76,91,149/– |
| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| 1. | ದೇವೇಂದ್ರಪ್ಪ ಗೌಡ. ಎಂ ಬಿರಾದಾರ ಒಂದನೇ ದರ್ಜೆ ಗುತ್ತಿಗೆದಾರರು | 4,24,22,821/– | 18.28 ಹೆಚ್ಚು | 12.554 ಹೆಚ್ಚು |

ಮೇಲ್ಕಂಡಂತೆ ಶ್ರೀ ದೇವೇಂದ್ರಪ್ಪ ಗೌಡ ಎಂ. ಬಿರಾದಾರ, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 12.554 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರನ್ನು ಸಂದಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರು ದಿನಾಂಕ 02.01.2012ರ ಪತ್ರದಲ್ಲಿ ಕಾಮಗಾರಿಯನ್ನು ಕೈಗೊಳ್ಳುವಾಗ ಎದುರಿಸಬೇಕಾದ ಸಮಸ್ಯೆಗಳ ಕುರಿತು ವಿವರಿಸುತ್ತಾ ಪ್ರಸ್ತುತ ಕಚ್ಚಾ ಸಾಮಗ್ರಿಗಳ ದರಗಳಲ್ಲಿ, ಸಾಗಣೆ ದರಗಳಲ್ಲಿ, ಕೂಲಿ ಕಾರ್ಮಿಕರ ಭತ್ಯೆಯಲ್ಲಿ ಉಂಟಾಗಿರುವ ಹೆಚ್ಚಳವನ್ನು ಪರಿಗಣಿಸಿ ಅವರು ನಮೂದಿಸಿದ ದರಗಳಿಗೆ ಟೆಂಡರನ್ನು ಅನುಮೋದಿಸಲು ಕೋರಿರುತ್ತಾರೆ.

ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 3,76,91,149/– ಗಳ ಮೇಲೆ ಶೆ. 12.50 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 4,24,02,543/– ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 01 ಅಪಿಬಂ 2012 (ತಾಂತ್ರಿಕ), ಬೆಂಗಳೂರು, ದಿನಾಂಕ : 17ನೇ ಜನವರಿ 2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಗುಲ್ಬರ್ಗಾ ಜಿಲ್ಲೆ, ಚಿಂಚೋಳಿ ತಾಲ್ಲೂಕಿನ ದೇಗಲಮಡಿ ಗ್ರಾಮದ ಹತ್ತಿರ ಮುಲ್ಲಮಾರಿ ನದಿಗೆ ಅಡ್ಡಲಾಗಿ ಬ್ಯಾರೇಜ್ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಡಲಾದ ಮೊತ್ತ ರೂ. 3,76,91,149/–ಗಳ ಮೇಲೆ ಶೇ. 12.50 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 4,24,02,543/– ಗಳಿಗೆ (ರೂ. ನಾಲ್ಕು ಕೋಟಿ ಇಪ್ಪತ್ತನಾಲ್ಕು ಲಕ್ಷ ಎರಡು ಸಾವಿರದ ಐನೂರ ನಲವತ್ಮೂರು ಮಾತ್ರ) ಗಳಿಗೆ ಶ್ರೀ. ದೇವೇಂದ್ರಪ್ಪ ಗೌಡ. ಎಂ. ಬಿರಾದಾರ, ಒಂದನೇ ದರ್ಜೆ ಗುತ್ತಿಗೆದಾರರು ರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20–01–2003 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 381 ಜಲ ಸಂಪನ್ಮೂಲ ಇಲಾಖೆ. (ಸಣ್ಣ ನೀರಾವರಿ)

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಉಡುಪಿ ಜಿಲ್ಲೆ, ಉಡುಪಿ ತಾಲ್ಲೂಕು, ಬೆಳ್ಳೆ ಗ್ರಾಮದ ಕಟ್ಟಿಂಗೇರಿ ದಿಂದೋಟ್ಟು ಎಂಬಲ್ಲಿ ಕಿಂಡಿ ಅಣೆಕಟ್ಟು ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋದನೆ ಬಗ್ಗೆ.

**ಓದಲಾಗಿದೆ :** 1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರುರವರ ಪತ್ರದ ಸಂಖ್ಯೆ:ಮುಸದ/ತಾಂಸ–5–ಸ.ಇಂ.11/ಉ.ಜಿ/ಉ.ತಾ/ಕಟ್ಟಿಂಗೇರಿ/ಇಪ್ರೊಕ್ಯೂರ್‌ಮೆಂಟ್/ ಟೆಂಡರ್ ಅನುಮೋದನೆ/2011/103, ದಿನಾಂಕ 07.01.2012.

**ಪ್ರಸ್ತಾವನೆ :**

ಉಡುಪಿ ಜಿಲ್ಲೆ, ಉಡುಪಿ ತಾಲ್ಲೂಕು, ಬೆಳ್ಳೆ ಗ್ರಾಮದ ಕಟ್ಟಿಂಗೇರಿ ದಿಂದೋಟ್ಟು ಎಂಬಲ್ಲಿ ಕಿಂಡಿ ಅಣೆಕಟ್ಟು ನಿರ್ಮಾಣ ಕಾಮಗಾರಿಯ ರೂ. 1115.00 ಲಕ್ಷಗಳ ಅಂದಾಜು ಪಟ್ಟಿಗೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರು ಇವರು ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಮಂಗಳೂರು ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 09–11–2011 |
| ಉಡುಪಿ ಜಿಲ್ಲಾ ಟೆಂಡರ್ ಬುಲೆಟಿನ್ | 08–11–2011 |
| ಉದಯವಾಣಿ ದಿನಪತ್ರಿಕೆ | 30–11–2011 |
| ಇಂಡಿಯನ್ ಎಕ್ಸ್‌ಪ್ರೆಸ್ | 30–11–2011 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಇಬ್ಬರು ಗುತ್ತಿಗೆದಾರರು ಭಾಗವಹಿಸಿದ್ದು ಇವರ ಟೆಂಡರ್ ಅರ್ಹತೆ ಹೊಂದಿದ್ದು ಇವರ ಆರ್ಥಿಕ ಬಿಡ್ ಅನ್ನು ದಿನಾಂಕ 04.01.2012 ರಂದು ತೆರೆಯಲಾಗಿದ್ದು ವಿವರಗಳು ಕೆಳಕಂಡಂತಿವೆ.

| | | | | |
|---|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ. 114,51,210/– |
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ. 114,68,858/– |
| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| 1. | ರಾಜೇಶ್ ಕಾರಂತ್, 1ನೇ ದರ್ಜೆ ಗುತ್ತಿಗೆದಾರರು | 131,65,017/– | 14.966 ಹೆಚ್ಚು | 14.789 ಹೆಚ್ಚು |

ಮೇಲ್ಕಂಡಂತೆ ಶ್ರೀ ರಾಜೇಶ್ ಕಾರಂತ್, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿದ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 14.789 ರಷ್ಟು ಹೆಚ್ಚಾಗಿರುತ್ತದೆ, ಸದರಿ ಟೆಂಡರನ್ನು ಪರಿಶೀಲಿಸಿ ಪರಿಷ್ಕೃತ ದರಗಳ ಮೇಲೆ ಶೇ. 14.60% ಹೆಚ್ಚಿನ ದರಗಳಿಗೆ ಅಂದರೆ ರೂ. 1,31,43,311/– ಗಳಿಗೆ ಟೆಂಡರನ್ನು ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 09 ಅಪಿಬಂ 2012 (ತಾಂತ್ರಿಕ), ಬೆಂಗಳೂರು, ದಿನಾಂಕ : 17ನೇ ಜನವರಿ 2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಉಡುಪಿ ಜಿಲ್ಲೆ, ಉಡುಪಿ ತಾಲ್ಲೂಕು, ಬೆಳ್ಳೆ ಗ್ರಾಮದ ಕಟ್ಟಿಂಗೇರಿ ದಿಂಡೋಟ್ಟು ಎಂಬಲ್ಲಿ ಕಿಂಡಿ ಅಣೆಕಟ್ಟು ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 114,68,858/–ಗಳ ಮೇಲೆ ಶೇ. 14.60ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 131,43,311/–ಗಳಿಗೆ (ರೂ. ಒಂದು ಕೋಟಿ ಮೂವತ್ತೊಂದು ಲಕ್ಷ ನಲವತ್ತಾ ಮೂರು ಸಾವಿರದ ಮೂರು ನೂರ ಹನ್ನೊಂದು ರೂಪಾಯಿಗಳು ಮಾತ್ರ) ಕಾಮಗಾರಿಯನ್ನು ಶ್ರೀ ರಾಜೇಶ್ ಕಾರಂತ್, 1ನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20–01–2003 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 382 ಜಲ ಸಂಪನ್ಮೂಲ ಇಲಾಖೆ. (ಸಣ್ಣ ನೀರಾವರಿ)

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಉಡುಪಿ ಜಿಲ್ಲೆ, ಉಡುಪಿ ತಾಲ್ಲೂಕು, ಕೋಡಿಬೆಂಗ್ರೆ ಹೊಳೆಗೆ ಬದಿ ಕಟ್ಟುವ ಕಾಮಗಾರಿ ಮತ್ತು ಕೋಡಿಬೆಂಗ್ರೆ ನದಿಗೆ ಫೆರಿಬೋಟ್ ನಿಲ್ಲಿಸುವ ಸ್ಥಳದಲ್ಲಿ ಪ್ರವಾಹ ಸಂರಕ್ಷಣಾ ಕಾಮಗಾರಿಯ ಟೆಂಡರ್ ಅನುಮೋದನೆ ಬಗ್ಗೆ.

**ಓದಲಾಗಿದೆ :** 1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರುರವರ ಪತ್ರದ ಸಂಖ್ಯೆ:ಮುಸದ/ತಾಂಸ–5–ಸ.ಇಂ.11/ಉ.ಜಿ/ಉ.ತಾ/ಕೋಡಿಬೆಂಗ್ರೆ/ಪ್ರನಿಕಾ/ಟೆಂಡರ್ ಅನುಮೋದನೆ / 2011/100, ದಿನಾಂಕ 07.01.2012.

**ಪ್ರಸ್ತಾವನೆ :**

ಪ್ರವಾಹ ನಿಯಂತ್ರಣ ಕಾರ್ಯಕ್ರಮದಡಿ ಉಡುಪಿ ಜಿಲ್ಲೆ, ಉಡುಪಿ ತಾಲ್ಲೂಕು, ಕೋಡಿಬೆಂಗ್ರೆ ಹೊಳೆಗೆ ಬದಿ ಕಟ್ಟುವ ಕಾಮಗಾರಿಯ ರೂ. 25.00 ಲಕ್ಷಗಳ ಅಂದಾಜು ಪಟ್ಟಿಗೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರು ಇವರು ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ ಮತ್ತು ಕೋಡಿಬೆಂಗ್ರೆ ನದಿಗೆ ಫೆರಿಬೋಟ್ ನಿಲ್ಲಿಸುವ ಸ್ಥಳದಲ್ಲಿ ಪ್ರವಾಹ ಸಂರಕ್ಷಣಾ ಕಾಮಗಾರಿಯ ರೂ. 15.00 ಲಕ್ಷಗಳ ಅಂದಾಜು ಪಟ್ಟಿಗೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರು ಇವರು ಆಡಳಿತಾತ್ಮಕ ಅನುಮೋದನೆ ಹಾಗೂ ಅಧೀಕ್ಷಕ ಇಂಜಿನಿಯರ್, ಸಣ್ಣ ನೀರಾವರಿ ವೃತ್ತ, ಮೈಸೂರು ಇವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಗಳ ಕೈಗೊಳ್ಳಲು ಮಂಗಳೂರು ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಉಡುಪಿ ಜಿಲ್ಲಾ ಟೆಂಡರ್ ಬುಲೆಟಿನ್ | 05–12–2011 |
| ಸಂಯುಕ್ತ ಕರ್ನಾಟಕ ದಿನ ಪತ್ರಿಕೆ | 11–12–2011 |
| ವಾರ್ತಾ ಭಾರತಿ | 11–12–2011 |

ದಿನಾಂಕ 22.12.2011ರಂದು ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಟೆಂಡರ್‌ಅನ್ನು ತೆರೆಯಲಾಗಿದ್ದು, ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಬ್ಬರು ಗುತ್ತಿಗೆದಾರರು ಭಾಗವಹಿಸಿದ್ದು ಇವರ ಟೆಂಡರ್ ಅರ್ಹತೆ ಹೊಂದಿದ್ದು, ವಿವರಗಳು ಕೆಳಕಂಡಂತಿವೆ.

| | | | | |
|---|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ. 39,62,482/– | |
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ. 50,14,492/– | |
| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| 1. | ರಾಜೇಶ್ ಕಾರಂತ್, 1ನೇ ದರ್ಜೆ ಗುತ್ತಿಗೆದಾರರು | 62,99,696/– | 58.9836 ಹೆಚ್ಚು | 25.6298 ಹೆಚ್ಚು |

ಮೇಲ್ಕಂಡಂತೆ ಶ್ರೀ ರಾಜೇಶ್ ಕಾರಂತ್, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿದ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 25.6298 ರಷ್ಟು ಹೆಚ್ಚಾಗಿರುತ್ತದೆ, ಸದರಿ ಟೆಂಡರನ್ನು ಪರಿಶೀಲಿಸಿ ಪರಿಷ್ಕೃತ ದರಗಳ ಮೇಲೆ ಶೇ. 14.75% ಹೆಚ್ಚಿನ ದರಗಳಿಗೆ ಅಂದರೆ ರೂ. 57,54,130/– ಗಳಿಗೆ ಟೆಂಡರನ್ನು ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 01 ಪ್ರನಿಕಾ 2012 (ತಾಂತ್ರಿಕ), ಬೆಂಗಳೂರು, ದಿನಾಂಕ: 17ನೇ ಜನವರಿ 2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಉಡುಪಿ ಜಿಲ್ಲೆ, ಉಡುಪಿ ತಾಲ್ಲೂಕು, ಕೋಡಿಬೆಂಗ್ರೆ ಹೊಳೆಗೆ ಬದಿ ಕಟ್ಟುವ ಕಾಮಗಾರಿ ಮತ್ತು ಕೋಡಿಬೆಂಗ್ರೆ ನದಿಗೆ ಫೆರಿಬೋಟ್ ನಿಲ್ಲಿಸುವ ಸ್ಥಳದಲ್ಲಿ ಪ್ರವಾಹ ಸಂರಕ್ಷಣಾ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 50,14,492/– ಗಳ ಮೇಲೆ ಶೇ. 14.75 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 57,54,130/–ಗಳಿಗೆ (ರೂ. ಐವತ್ತೇಳು ಲಕ್ಷ ಐವತ್ತಾ ನಾಲ್ಕು ಸಾವಿರದ ಒಂದು ನೂರ ಮೂವತ್ತು ರೂಪಾಯಿಗಳು ಮಾತ್ರ) ಕಾಮಗಾರಿಯನ್ನು ಶ್ರೀ ರಾಜೇಶ್ ಕಾರಂತ್, 1ನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20–01–2003 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 383 ಜಲ ಸಂಪನ್ಮೂಲ ಇಲಾಖೆ. (ಸಣ್ಣ ನೀರಾವರಿ)

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಗುಲ್ಬರ್ಗಾ ಜಿಲ್ಲೆ, ಚಿಂಚೋಳಿ ತಾಲ್ಲೂಕಿನ ಕೊಟಗಾ ಗ್ರಾಮದ ಮುಲ್ಲಮಾರಿ ನದಿಗೆ ಅಡ್ಡಲಾಗಿ ಬಿಸಿಬಿ ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋದಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸನೀಇ 06 ನಯೋಕಾ 2009 ದಿನಾಂಕ:06–10–2010.
2. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ: ಮುಇಂ/ಸನೀ(ಉ)/ವ/ಬಿಜೆಪಿ/ಪಿಬಿ–5/2011–12/11 ದಿನಾಂಕ: 03.01.2012

**ಪ್ರಸ್ತಾವನೆ :**

ಗುಲ್ಬರ್ಗಾ ಜಿಲ್ಲೆ ಚಿಂಚೋಳಿ ತಾಲ್ಲೂಕಿನ ಕೊಟಗಾ ಗ್ರಾಮದ ಹತ್ತಿರ ಮುಲ್ಲಮಾರಿ ನದಿಗೆ ಅಡ್ಡಲಾಗಿ ಬಿಸಿಬಿ ನಿರ್ಮಾಣ ಕಾಮಗಾರಿ ಅಂದಾಜಿಗೆ ಉಲ್ಲೇಖ (1) ರಲ್ಲಿ ನಮೂದಿಸಿರುವ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಗುಲ್ಬರ್ಗಾ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 29–09–2011 |
| ಜಿಲ್ಲಾ ಟೆಂಡರ್ ಬುಲೆಟಿನ್ | 01–10–2011 |
| ಸಂಯುಕ್ತ ಕರ್ನಾಟಕ ದಿನಪತ್ರಿಕೆ | 01–10–2011 |

| | |
|---|---|
| ವಿಜಯ ಕರ್ನಾಟಕ ದಿನಪತ್ರಿಕೆ | 02.10.2011 |
| ಡೆಕ್ಕನ್ ಹೆರಾಲ್ಡ್ ಆಂಗ್ಲ ದಿನಪತ್ರಿಕೆ | 01.10.2011 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಸ್ಪಂದಿಸಿ ಮೂರು ಜನ ಗುತ್ತಿಗೆದಾರರು ಭಾಗವಹಿಸಿದ್ದು ಈ ಪೈಕಿ ಒಬ್ಬರು ಗುತ್ತಿಗೆದಾರರು ಅರ್ಹತೆ ಹೊಂದಿದ್ದು ಇವರ ಆರ್ಥಿಕ ಬಿಡ್ ಅನ್ನು ದಿನಾಂಕ 07.12.2011 ರಂದು ತೆರೆದು ಪರಿಶೀಲಿಸಲಾಗಿದ್ದು ವಿವರಗಳು ಕೆಳಕಂಡಂತಿವೆ.

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ.1,83,23,489/- |
| ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | ರೂ.2,35,12,452/- |

| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
|---|---|---|---|---|
| 1. | ಶ್ರೀ. ವಿಠೋಬಾ ಡಿ. ಗೌಂಡಿ ಒಂದನೇ ದರ್ಜೆ ಗುತ್ತಿಗೆದಾರರು | 2,55,46,806/- | 39.42 ಹೆಚ್ಚು | 8.652 ಹೆಚ್ಚು |

ಮೇಲ್ಕಂಡಂತೆ ಶ್ರೀ. ವಿಠೋಬಾ ಡಿ. ಗೌಂಡಿ ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 8.652 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರು ದಿನಾಂಕ 12.01.2012ರ ಪತ್ರದಲ್ಲಿ ಕಾಮಗಾರಿಯನ್ನು ಕೈಗೊಳ್ಳುವಾಗ ಎದುರಿಸಬೇಕಾದ ಸಮಸ್ಯೆಗಳ ಕುರಿತು ವಿವರಿಸುತ್ತಾ ಪ್ರಸ್ತುತ ಕಚ್ಚಾ ಸಾಮಗ್ರಿಗಳ ದರಗಳಲ್ಲಿ, ಸಾಗಣೆ ದರಗಳಲ್ಲಿ, ಕೂಲಿ ಕಾರ್ಮಿಕರ ಭತ್ಯೆಯಲ್ಲಿ ಉಂಟಾಗಿರುವ ಹೆಚ್ಚಳವನ್ನು ಪರಿಗಣಿಸಿ ಅವರು ನಮೂದಿಸಿದ ದರಗಳಿಗೆ ಟೆಂಡರನ್ನು ಅನುಮೋದಿಸಲು ಕೋರಿರುತ್ತಾರೆ.

ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 2,35,12,452/- ಗಳಿಗೆ ಮೇಲೆ ಶೇ. 8.50ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 2,55,11,010/- ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 06 ಅಪಿಬಂ 2012 (ತಾಂತ್ರಿಕ), ಬೆಂಗಳೂರು, ದಿನಾಂಕ : 16ನೇ ಜನವರಿ 2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಗುಲ್ಬರ್ಗಾ ಜಿಲ್ಲೆ, ಚಿಂಚೋಳಿ ತಾಲ್ಲೂಕಿನ ಕೊಟಗಾ ಗ್ರಾಮದ ಹತ್ತಿರ ಮುಲ್ಲಮಾರಿ ನದಿಗೆ ಅಡ್ಡಲಾಗಿ ಬಿಸಿಬಿ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಡಲಾದ ಮೊತ್ತ ರೂ. 2,35,12,452/-ಗಳ ಮೇಲೆ ಶೇ. 8.50 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 2,55,11,010/- ಗಳಿಗೆ (ರೂ. ಎರಡು ಕೋಟಿ ಐವತ್ತೈದು ಲಕ್ಷ ಹನ್ನೊಂದು ಸಾವಿರದ ಹತ್ತು ಮಾತ್ರ) ಗಳಿಗೆ ಶ್ರೀ. ವಿಠೋಬಾ ಡಿ. ಗೌಂಡಿ ಒಂದನೇ ದರ್ಜೆ ಗುತ್ತಿಗೆದಾರರು ರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20-01-2003 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 384 ಜಲ ಸಂಪನ್ಮೂಲ ಇಲಾಖೆ. (ಸಣ್ಣ ನೀರಾವರಿ)

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಉಡುಪಿ ಜಿಲ್ಲೆ, ಉಡುಪಿ ತಾಲ್ಲೂಕು, ನಡೂರು ಗ್ರಾಮದ ಕಂಬಳಗದ್ದೆ ಎಂಬಲ್ಲಿ ಕಿಂಡಿ ಅಣೆಕಟ್ಟು ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋದನೆ ಬಗ್ಗೆ.

**ಓದಲಾಗಿದೆ :** 1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರುರವರ ಪತ್ರದ ಸಂಖ್ಯೆ:ಮುಸದ/ತಾಂಸ-5-ಸ.ಇ.11/ಉ.ಜಿ/ಉ.ತಾ/ಕಂಬಳಗದ್ದೆ/ಇಪ್ರೊಕ್ಯೂರ್‌ಮೆಂಟ್/ ಟೆಂಡರ್ ಅನುಮೋದನೆ / 2011/102, ದಿನಾಂಕ 07.01.2012.

**ಪ್ರಸ್ತಾವನೆ :**

ಉಡುಪಿ ಜಿಲ್ಲೆ, ಉಡುಪಿ ತಾಲ್ಲೂಕು, ನಡೂರು ಗ್ರಾಮದ ಕಂಬಳಗದ್ದೆ ಎಂಬಲ್ಲಿ ಕಿಂಡಿ ಅಣೆಕಟ್ಟು ನಿರ್ಮಾಣ ಕಾಮಗಾರಿಯ ರೂ. 60.00ಲಕ್ಷಗಳ ಅಂದಾಜು ಪಟ್ಟಿಗೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರು ಇವರು ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಮಂಗಳೂರು ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಉಡುಪಿ ಜಿಲ್ಲಾ ಟೆಂಡರ್ ಬುಲೆಟಿನ್ | 08–11–2011 |
| ವಿಜಯ ಕರ್ನಾಟಕ ದಿನ ಪತ್ರಿಕೆ | 27–11–2011 |
| ಇಂಡಿಯನ್ ಎಕ್ಸ್‌ಪ್ರೆಸ್ | 27–11–2011 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಇಬ್ಬರು ಗುತ್ತಿಗೆದಾರರು ಭಾಗವಹಿಸಿದ್ದು ಇವರಲ್ಲಿ ಒಬ್ಬರು ಮಾತ್ರ ಅರ್ಹತೆ ಹೊಂದಿದ್ದು, ಇವರ ಆರ್ಥಿಕ ಬಿಡ್ ಅನ್ನು ದಿನಾಂಕ 04.01.2012ರಂದು ತೆರೆಯಲಾಗಿದ್ದು ವಿವರಗಳು ಕೆಳಕಂಡಂತಿವೆ.

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 59,21,662/– |
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 59,35,154/– |

| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
|---|---|---|---|---|
| 1. | ರಾಜೇಶ್ ಕಾರಂತ್, 1ನೇ ದರ್ಜೆ ಗುತ್ತಿಗೆದಾರರು | 71,06,010/– | 20.00 ಹೆಚ್ಚು | 19.727 ಹೆಚ್ಚು |

ಮೇಲ್ಕಂಡಂತೆ ಶ್ರೀ ರಾಜೇಶ್ ಕಾರಂತ್, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿದ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 19.727 ರಷ್ಟು ಹೆಚ್ಚಾಗಿರುತ್ತದೆ, ಸದರಿ ಟೆಂಡರನ್ನು ಪರಿಶೀಲಿಸಿ ಪರಿಷ್ಕೃತ ದರಗಳ ಮೇಲೆ ಶೇ. 14.60% ಹೆಚ್ಚಿನ ದರಗಳಿಗೆ ಅಂದರೆ ರೂ. 68,01,686/– ಗಳಿಗೆ ಟೆಂಡರನ್ನು ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 08 ಅಪಿಬಂ 2012 (ತಾಂತ್ರಿಕ), ಬೆಂಗಳೂರು, ದಿನಾಂಕ: 17ನೇ ಜನವರಿ 2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಉಡುಪಿ ಜಿಲ್ಲೆ, ಉಡುಪಿ ತಾಲ್ಲೂಕು, ನಡೂರು ಗ್ರಾಮದ ಕಂಬಳಗದ್ದೆ ಎಂಬಲ್ಲಿ ಕಿಂಡಿ ಅಣೆಕಟ್ಟು ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 59,35,154/– ಗಳ ಮೇಲೆ ಶೇ. 14.60 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 68,01,686/–ಗಳಿಗೆ (ರೂ.ಅರವತ್ತೆಂಟು ಲಕ್ಷ ಒಂದು ಸಾವಿರದ ಆರು ನೂರ ಎಂಬತ್ತಾರು ರೂಪಾಯಿಗಳು ಮಾತ್ರ) ಕಾಮಗಾರಿಯನ್ನು ಶ್ರೀ ರಾಜೇಶ್ ಕಾರಂತ್, 1ನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20–01–2003 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 385 ಜಲ ಸಂಪನ್ಮೂಲ ಇಲಾಖೆ. (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ದಾವಣಗೆರೆ ಜಿಲ್ಲೆ, ಜಗಳೂರು ತಾಲ್ಲೂಕು ಮರಿಕುಂಟೆ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ನ್ಯಾಯಾಲಯದ ಆದೇಶದಂತೆ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ಪತ್ರ ಸಂಖ್ಯೆ:ಮುಸದ/ಲೆಶಾಖೆ/ಲೆಸ–1/3/ಭೂಸ್ವಾಧೀನ/11–12/2598, ದಿನಾಂಕ 17/11/2011.

**ಪ್ರಸ್ತಾವನೆ :**

ದಾವಣಗೆರೆ ಜಿಲ್ಲೆ, ಜಗಳೂರು ತಾಲ್ಲೂಕು ಮರಿಕುಂಟೆ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಮರಿಕುಂಟೆ ಗ್ರಾಮದ ಸರ್ವೆ ನಂಬರ್‌ಗಳ ಜಮೀನುಗಳಿಗೆ ಎಲ್.ಎ.ಸಿ. ಪ್ರಕರಣದಲ್ಲಿ ನೀಡಿರುವ ಆದೇಶದಂತೆ ಹೆಚ್ಚುವರಿ ಪರಿಹಾರ ಮೊತ್ತ ಪಾವತಿಸಲು ಅನುದಾನ ಬಿಡುಗಡೆ ಮಾಡಲು ಮೇಲೆ ಓದಲಾದ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರು ದಿನಾಂಕ 17/11/11ರ ಪತ್ರದಲ್ಲಿ ಕೋರಿದ್ದಾರೆ.

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರ ಅಧಿಸೂಚನೆ ದಿನಾಂಕ 15/11/1984ರಂದು ಹೊರಡಿಸಲಾಗಿದೆ.
- ಭೂಸ್ವಾಧೀನ ಕಾಯ್ದೆ ಕಲಂ 11(ಎ)ರಂತೆ ಭೂಸ್ವಾಧೀನಾಧಿಕಾರಿಗಳು ಪರಿಹಾರದ ಐತೀರ್ಪು ಘೋಷಿಸಿದ ದಿನಾಂಕ 27/06/1986.
- ಜಮೀನಿನ ಕಟ್ಟೆಯನ್ನು ದಿನಾಂಕ 27/07/1979ರಂದು ಪಡೆಯಲಾಗಿದೆ.

ಭೂಸ್ವಾಧೀನಾಧಿಕಾರಿಗಳ ಐತೀರ್ಪಿನಂತೆ ಪರಿಹಾರ ಪಡೆದ ಭೂಮಾಲೀಕರು ಇನ್ನೂ ಹೆಚ್ಚಿನ ಪರಿಹಾರಕ್ಕಾಗಿ ದಾವಣಗೆರೆ ಸಿವಿಲ್ ಜಡ್ಜ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಎಲ್.ಎ.ಸಿ. ಪ್ರಕರಣಗಳನ್ನು ದಾಖಲಿಸಿದ್ದು, ಮಾನ್ಯ ನ್ಯಾಯಾಲಯವು ಮುಖ್ಯ ಪ್ರಕರಣ ಸಂಖ್ಯೆ:86/87ರಲ್ಲಿ ದಿನಾಂಕ 23/07/1998ರಂದು ನೀಡಿದ ಸಾಮಾನ್ಯ ತೀರ್ಪಿನಲ್ಲಿ ಪ್ರತಿ ಎಕರೆ ಜಮೀನಿಗೆ ರೂ. 10,000/–ಗಳ ಭೂಮೌಲ್ಯವನ್ನು ನಿಗದಿಪಡಿಸಿದೆ.

ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಇಲಾಖೆಯ ಪತ್ರ ಸಂಖ್ಯೆ:ಲಾ 315 ಎಲ್ಎಸ್ಎ 98, ದಿನಾಂಕ 22/04/99ರಂದು ಅಭಿಪ್ರಾಯ ನೀಡಿದೆ.

ಪಾವತಿಸಬೇಕಾದ ಪರಿಹಾರದ ವಿವರ ಕೆಳಕಂಡಂತಿದೆ:

| ಕ್ರ.ಸಂ. | ಎಲ್.ಎ.ಸಿ. ಸಂಖ್ಯೆ | ಮರಿಕುಂಟೆ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|
| 1 | 79/87 | 92 | 18–25 | 512924 |
| 2 | 86/87 | 75/ಪಿ | 5–01 | 138391 |
| 3 | 148/92 | 86/5 | 4–04 | 112910 |
| 4 | 73/87 | 78 | 14–00 | 385555 |
| 5 | 78/87 | 76 | 8–16 | 228526 |
| 6 | 87/87 | 86/4 | 1–15 | 37856 |
| 7 | 80/87 | 67 | 0–23 | 15824 |
| | ಒಟ್ಟು | | | 1431986 |

ಮೇಲ್ಕಂಡ ಅಂಶಗಳನ್ನು ಪರಿಶೀಲಿಸಿ, ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 176 ಭೂಸ್ವಾಪ್ರ 2011, ಬೆಂಗಳೂರು, ದಿನಾಂಕ: 12ನೇ ಜನವರಿ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ದಾವಣಗೆರೆ ಜಿಲ್ಲೆ, ಜಗಳೂರು ತಾಲ್ಲೂಕು ಮರಿಕುಂಟೆ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಮರಿಕುಂಟೆ ಗ್ರಾಮಕ್ಕೆ ಸೇರಿದ ಮೇಲ್ಕಂಡ ಸ.ನಂ.ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಪರಿಹಾರ ರೂ. 14,31,986–00ಗಳನ್ನು (ಹದಿನಾಲ್ಕು ಲಕ್ಷದ ಮೂವತ್ತೊಂದು ಸಾವಿರದ ಒಂಭೈನೂರ ಎಂಭತ್ತಾರು ರೂ.ಗಳು ಮಾತ್ರ) ಈ ಕೆಳಕಂಡ ಷರತ್ತುಗಳಿಗೊಳಪಟ್ಟು ನೀಡಲು ಸರ್ಕಾರದ ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು ಆಯವ್ಯಯದ ಲೆಕ್ಕಶೀರ್ಷಿಕೆ "4702–00–101–5–01–139 (ಯೋಜನೆ)" ಅಡಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ 20/10/10ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 386

**ಕೆ.ಸಿ. ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಇಂಧನ ಸಚಿವಾಲಯ

**ವಿಷಯ :** ಮೆ॥ ವಾಸುಕಿ ಪವರ್ ಪ್ರೈವೇಟ್ ಲಿಮಿಟೆಡ್ ರವರಿಗೆ ಹಾವೇರಿ ಜಿಲ್ಲೆಯ ಸವಣೂರು ತಾಲ್ಲೂಕಿನ ಚಿಲ್ಲೂರು ಗ್ರಾಮದಲ್ಲಿ 10 ಮೆ.ವ್ಯಾ. ಸಾಮರ್ಥ್ಯದ ಜೈವಿಕ ಇಂಧನ ಆಧಾರಿತ ವಿದ್ಯುತ್ ಸ್ಥಾವರ ಸ್ಥಾಪನೆಗೆ ನಿರಾಕ್ಷೇಪಣೆ ನೀಡುವ ಕುರಿತು.

**ಓದಲಾಗಿದೆ:** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/04/ಎಫ್–145/ವಿಪಿಪಿಎಲ್/2011–12/4554 ದಿನಾಂಕ: 07.12.2011.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ॥ ವಾಸುಕಿ ಪವರ್ ಪ್ರೈವೇಟ್ ಲಿಮಿಟೆಡ್ ಹಾವೇರಿ ಜಿಲ್ಲೆಯ ಸವಣೂರು ತಾಲ್ಲೂಕಿನ ಚಿಲ್ಲೂರು ಗ್ರಾಮದಲ್ಲಿ 10.00 ಮೆ.ವ್ಯಾ. ಸಾಮರ್ಥ್ಯದ ಜೈವಿಕ ಇಂಧನ ಆಧಾರಿತ ವಿದ್ಯುತ್ ಸ್ಥಾವರ ಸ್ಥಾಪಿಸಲು ನಿರಾಕ್ಷೇಪಣೆಯನ್ನು ನೀಡುವಂತೆ ಸರ್ಕಾರಕ್ಕೆ ಶಿಫಾರಸು ಮಾಡಿ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಎನ್ 423 ಎನ್‌ಸಿಇ 2011, ಬೆಂಗಳೂರು, ದಿನಾಂಕ: 13–01–2012**

ಮೆ॥ ವಾಸುಕಿ ಪವರ್ ಪ್ರೈವೇಟ್ ಲಿಮಿಟೆಡ್ ಹಾವೇರಿ ಜಿಲ್ಲೆಯ ಸವಣೂರು ತಾಲ್ಲೂಕಿನ ಚಿಲ್ಲೂರು ಗ್ರಾಮದಲ್ಲಿ 10.00 ಮೆ.ವ್ಯಾ. ಸಾಮರ್ಥ್ಯದ ಜೈವಿಕ ಇಂಧನ ಆಧಾರಿತ ವಿದ್ಯುತ್ ಸ್ಥಾವರ ಸ್ಥಾಪಿಸಲು ಈ ಕೆಳಗಿನ ಷರತ್ತಿಗೊಳಪಟ್ಟು ನಿರಾಕ್ಷೇಪಣೆಯನ್ನು ನೀಡಲಾಗಿದೆ.

1. ಅಭಿವೃದ್ಧಿದಾರರು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದಿಂದ ವಿದ್ಯುತ್ ರವಾನೆ ವ್ಯವಸ್ಥೆ ಸಂಬಂಧ (Evaluation of Power) ಪ್ರತ್ಯೇಕವಾಗಿ ಅನುಮೋದನೆ ಪಡೆಯತಕ್ಕದ್ದು.
2. ಅಭಿವೃದ್ಧಿದಾರರು ಬೆಸ್ಕಾಂ ಹಾಗೂ ಹೆಸ್ಕಾಂನೊಂದಿಗೆ ತಲಾ 5.00 ಮೆ.ವ್ಯಾ. ವಿದ್ಯುತ್ತಿಗೆ ಸಂಬಂಧಿಸಿದಂತೆ (ಒಟ್ಟು 10.00 ಮೆ.ವ್ಯಾ.) ವಿದ್ಯುತ್ ಖರೀದಿ ಒಪ್ಪಂದವನ್ನು (ಪಿಪಿಎ) ಮಾಡಿಕೊಳ್ಳತಕ್ಕದ್ದು.
3. ಈ ಸ್ಥಾವರಕ್ಕೆ ಸಂಬಂಧಿಸಿದಂತೆ ಎಲ್ಲೆಲ್ಲಿ ಶಾಸನಬದ್ಧ ಅನುಮೋದನೆ ಅವಶ್ಯಕತೆಯಿದೆಯೋ ಅಂದರೆ ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ/ಕಂದಾಯ/ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತಿತರ ಇಲಾಖೆಗಳಿಂದ ಪಡೆದುಕೊಳ್ಳತಕ್ಕದ್ದು.
4. ಈ ಸ್ಥಾವರ ಅನುಷ್ಠಾನಗೊಳಿಸುವ ಮುನ್ನ ಅಭಿವೃದ್ಧಿದಾರರು ವಿಸ್ತೃತ ಯೋಜನಾ ವರದಿಯನ್ನು (ಡಿ.ಪಿ.ಆರ್.) ತಯಾರಿಸಿ ಕ್ರೆಡಲ್ ಸಂಸ್ಥೆಯಿಂದ ಅನುಮೋದನೆ ಪಡೆಯತಕ್ಕದ್ದು.

ಸದರಿ ಆದೇಶವನ್ನು ರದ್ದುಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

ಪಿ.ಆರ್. 387

## ಇಂಧನ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಇಎನ್ 399 ಎನ್‌ಸಿಇ 2011, ಬೆಂಗಳೂರು, ದಿನಾಂಕ: 07.01.2012**

ಮೆ॥ ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಲಿಮಿಟೆಡ್‌ರವರಿಗೆ ಸರ್ಕಾರಿ ಆದೇಶ ಸಂಖ್ಯೆ: ಇಎನ್ 302 ಎನ್‌ಸಿಇ 2006 ದಿನಾಂಕ: 16.10.2006ರ ಆದೇಶದನ್ವಯ ಕೋಲಾರ, ತುಮಕೂರು, ದಾವಣಗೆರೆ, ಬೆಂಗಳೂರು ಗ್ರಾಮೀಣ, ಹಾಸನ, ಶಿವಮೊಗ್ಗ ಮತ್ತು ಧಾರವಾಡ ಜಿಲ್ಲೆಗಳಲ್ಲಿ ಒಟ್ಟು 477.36 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆಮಾಡಿದ್ದು, ಸದರಿ ಆದೇಶ ಭಾಗದ ಕ್ರಮ ಸಂಖ್ಯೆ 4ರಲ್ಲಿ ನಮೂದಿಸಲಾಗಿರುವ

"ಅಯ್ಯನ ಹಳ್ಳಿ, ಬೀಶನಹಳ್ಳಿ, ಹೊಸಹಳ್ಳಿ, ಮಾರಿಕಟ್ಟೆ, ನಿಂಬಳಗೇರೆ, ದಾವಣಗೆರೆ ಜಿಲ್ಲೆ"

ಎಂಬುದನ್ನು

"ಅಯ್ಯನಹಳ್ಳಿ, ಬೀಶನಹಳ್ಳಿ, ಹೊಸಹಳ್ಳಿ, ಮಾರಿಕಟ್ಟೆ, ದಾವಣಗೆರೆ ಜಿಲ್ಲೆ ಮತ್ತು ನಿಂಬಳಗೇರೆ, ಬಳ್ಳಾರಿ ಜಿಲ್ಲೆ"

ಎಂದು ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

ಪಿ.ಆರ್. 388

## ಕಂದಾಯ ಸಚಿವಾಲಯ

### ತಿದ್ದುಪಡಿ ಆದೇಶ

**ಸಂಖ್ಯೆ: ಆರ್‌ಡಿ 385 ಎಲ್‌ಜಿಬಿ 2011, ಬೆಂಗಳೂರು, ದಿನಾಂಕ: 06.01.2012**

ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 385 ಎಲ್‌ಜಿಬಿ 2011ರ ಆದೇಶದ ಭಾಗದಲ್ಲಿರುವ **ಮಿಥಿಕ್ ಸೊಸೈಟಿ ಇಂಡಾಲಜಿ** ಎಂದಿರುವುದನ್ನು **ದಿ ಮಿಥಿಕ್ ಸೊಸೈಟಿ** ಎಂಬುದಾಗಿ ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ಕೆ. ರಾಮಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಭೂ.ಮಂ).

ಪಿ.ಆರ್. 390

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ಲೋಕಾಯುಕ್ತದಲ್ಲಿ ಗುತ್ತಿಗೆ ಆಧಾರದ ಮೇಲೆ ಅಪರ ನಿಬಂಧಕ (ವಿಚಾರಣೆಗಳು) ರಾಗಿ ನೇಮಕವಾಗಿರುವ ಶ್ರೀ ಸುಧಾರಕರ್, ಎ. ಪಂಡಿತ್ ನಿವೃತ್ತ ಜಿಲ್ಲಾ ನ್ಯಾಯಾಧೀಶರು ಇವರ ವೇತನವನ್ನು ಪುನರ್‌ನಿಗದಿಪಡಿಸುವ ಬಗ್ಗೆ.

**ಓದಲಾಗಿದೆ:**
1. ಅಧಿಸೂಚನೆ ಸಂಖ್ಯೆ: ಸಿಆಸುಇ 56 ಸೇಲೋಯು 2008 ದಿ: 6.8.2008.
2. ಅಧಿಸೂಚನೆ ಸಂಖ್ಯೆ: ಸಿಆಸುಇ 172 ಸೇಲೋಯು 2010 ದಿ: 3.9.2010.
3. ಅಧಿಸೂಚನೆ ಸಂಖ್ಯೆ: ಸಿಆಸುಇ 116 ಸೇಲೋಯು 2011, ದಿ: 26.08.2011.
4. ಆದೇಶ ಸಂ: ಸಿಆಸುಇ 56(4) ಸೇಲೋಯು 2008 (ಭಾ), ದಿ: 27.5.2009.
5. ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆಯ ಸರ್ಕಾರಿ ಆದೇಶ ಸಂ: ಎಲ್‌ಎಡಬ್ಲ್ಯೂ 147 ಎಲ್‌ಎಸಿ 2009 ದಿ: 30.9.2010 ಮತ್ತು ದಿ: 13.10.2010.
6. ಕರ್ನಾಟಕ ಲೋಕಾಯುಕ್ತದ ನಿಬಂಧಕರ ದಿ: 20.10.2011ರ ಪತ್ರ ಸಂ: ಕಲೋ/ಸಿಬ್ಬಂದಿ(1)/111/2006–07.

**ಪ್ರಸ್ತಾವನೆ :**

ಶ್ರೀ ಸುಧಾಕರ್, ಎ. ಪಂಡಿತ್, ನಿವೃತ್ತ ಜಿಲ್ಲಾ ನ್ಯಾಯಧೀಶರು ಇವರನ್ನು ಕರ್ನಾಟಕ ಲೋಕಾಯುಕ್ತ ಸಂಸ್ಥೆಯಲ್ಲಿ ಖಾಲಿಯಿದ್ದ ಅಪರ ನಿಬಂಧಕ (ವಿಚಾರಣೆಗಳು) ಹುದ್ದೆಗೆ ಮೇಲೆ (1) ರಲ್ಲಿ ಓದಲಾದ ದಿನಾಂಕ 6.8.2008 ರ ಅಧಿಸೂಚನೆಯಲ್ಲಿ ಗುತ್ತಿಗೆ ಆಧಾರದ ಮೇಲೆ ಎರಡು

ವರ್ಷಗಳ ಅವಧಿಗೆ ನೇಮಕಾತಿ ಮಾಡಿದ್ದು, ದಿನಾಂಕ 8.8.2008 ರಿಂದ ಕರ್ತವ್ಯ ನಿರ್ವಹಿಸಿರುತ್ತಾರೆ. ಇವರ ಗುತ್ತಿಗೆ ಆಧಾರದ ನೇಮಕಾತಿಯನ್ನು ದಿನಾಂಕ: 18.8.2010ರಿಂದ ಜಾರಿಗೆ ಬರುವಂತೆ ಮೇಲೆ (2) ರಲ್ಲಿ ಓದಲಾದ ದಿನಾಂಕ 3.9.2010ರ ಅಧಿಸೂಚನೆಯ ಮೂಲಕ ಮತ್ತೊಂದು ವರ್ಷದ ಅವಧಿಗೆ ಮುಂದುವರಿಸಲಾಗಿತ್ತು. ತದನಂತರ, ದಿನಾಂಕ 26.8.2011 ರ ಅಧಿಸೂಚನೆಯಲ್ಲಿ (ಮೇಲೆ (3) ರಲ್ಲಿ ಓದಲಾಗಿದೆ) ದಿನಾಂಕ 18.8.2011 ರಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಇವರ ಹಾಲಿ ಗುತ್ತಿಗೆ ಆಧಾರದ ನೇಮಕಾತಿಯನ್ನು ಮುಂದುವರಿಸಲಾಗಿದೆ.

ಮೇಲೆ (4) ರಲ್ಲಿ ಓದಲಾಗಿರುವ ದಿ: 27.5.2009ರ ಆದೇಶದಲ್ಲಿ ಶ್ರೀ ಸುಧಾಕರ್ ಎ. ಪಂಡಿತ್‌ರವರು ಪಡೆಯುತ್ತಿರುವ ನಿವೃತ್ತಿ ವೇತನದೊಂದಿಗೆ ₹ 5,463/– ಮರುನೇಮಕಾತಿ ವೇತನವನ್ನು ಪಡೆಯಲು ಅರ್ಹರಾಗಿರುತ್ತಾರೆ ಎಂದು ತಿಳಿಸಲಾಗಿತ್ತು.

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆಯು ಹೊರಡಿಸಿರುವ ಮೇಲೆ (5) ರಲ್ಲಿ ಓದಲಾದ ದಿನಾಂಕ 30.9.2010 ಮತ್ತು 13.10.2010 ರ ಆದೇಶಗಳಲ್ಲಿ ನಿವೃತ್ತ ನ್ಯಾಯಾಂಗ ಅಧಿಕಾರಿಗಳ ನಿವೃತ್ತಿ ವೇತನವನ್ನು ಪೂರ್ವಾನ್ವಯವಾಗಿ ಪರಿಷ್ಕರಿಸಿರುವುದರಿಂದ, ತಮ್ಮ ಗುತ್ತಿಗೆ ಆಧಾರದ ನೇಮಕಾತಿಯ ವೇತನವನ್ನು ದಿನಾಂಕ 18.8. 2008ರಿಂದ ಪೂರ್ವಾನ್ವಯವಾಗಿ ಮುನರ್‌ನಿಗದಿಪಡಿಸುವಂತೆ ಶ್ರೀ ಸುಧಾಕರ್ ಎ. ಪಂಡಿತ್‌ರವರು ಸಲ್ಲಿಸಿರುವ ಕೋರಿಕೆಯನ್ನು ಪರಿಗಣಿಸಲು ಮೇಲೆ (6) ರಲ್ಲಿ ಓದಲಾದ ದಿನಾಂಕ 20.10.2011 ರ ಪತ್ರದಲ್ಲಿ ಕರ್ನಾಟಕ ಲೋಕಾಯುಕ್ತದ ನಿಬಂಧಕರು ಕೋರಿರುತ್ತಾರೆ.

ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 116 ಸೇಲೋಯ 2011, ಬೆಂಗಳೂರು, ದಿನಾಂಕ: 12.01.2012**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ, ಶ್ರೀ ಸುಧಾಕರ್ ಎ. ಪಂಡಿತ್, ಅಪರ ನಿಬಂಧಕರು (ವಿಚಾರಣೆಗಳು), ಕರ್ನಾಟಕ ಲೋಕಾಯುಕ್ತ ಇವರ ವೇತನವನ್ನು ಕರ್ನಾಟಕ ನಾಗರಿಕ ಸೇವಾ ನಿಯಮಗಳ ನಿಯಮ 313 (ಬಿ) ಪ್ರಕಾರ ₹ 23,040/– ದಿನಾಂಕ 18.8.2008ರಿಂದ ಪೂರ್ವಾನ್ವಯವಾಗಿ ಮುನರ್‌ನಿಗದಿಪಡಿಸಲಾಗಿದೆ. ಈ ಮರುನೇಮಕಾತಿ ವೇತನದೊಂದಿಗೆ ಶ್ರೀಯುತರು ನಿವೃತ್ತಿ ಸಮಯದಲ್ಲಿ ಪಡೆಯುತ್ತಿದ್ದ ಮೂಲ ವೇತನವಾದ (ಪರಿಷ್ಕೃತ) ₹ 63,070/– ಕ್ಕೆ ಲಭ್ಯವಾಗುವ ತುಟ್ಟಿಭತ್ಯೆ, ಮನೆ ಬಾಡಿಗೆ ಭತ್ಯೆ, ನಗರ ಪರಿಹಾರ ಭತ್ಯೆಗಳನ್ನು ಪಡೆಯಲು ಅರ್ಹರಿರುತ್ತಾರೆ. ಆದರೆ, ನಿವೃತ್ತಿ ವೇತನದ ಮೇಲಿನ ತುಟ್ಟಿಭತ್ಯೆಯನ್ನು ಪಡೆಯುವಂತಿಲ್ಲ. ನಿವೃತ್ತಿ ನಂತರದ ಸೇವೆಯನ್ನು ಅರ್ಹತಾದಾಯಕ ಸೇವೆಯೆಂದು ಪರಿಗಣಿಸುವಂತಿಲ್ಲ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ: ಆಇ 1265 ಸೇ–3/2011, ದಿ: 7.12.2011 ಮತ್ತು ಆಇ 1344ನೇ–3/11 ದಿನಾಂಕ 31.12.2011ಗಳಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ. ನಾಗೇಶ್ ಪಾಟಕ್**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 391 ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

(ಸೇವಾ ನಿಯಮಗಳು–2)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಎಲ್. ರಾಧಾಕೃಷ್ಣ, ಕೆಎಎಸ್ (ಆಯ್ಕೆ ಶ್ರೇಣಿ) ಇವರು ಸ್ಥಿರ ಮತ್ತು ಚರಾಸ್ತಿ ವಿವರಗಳನ್ನು ಸಕಾಲದಲ್ಲಿ ಸಲ್ಲಿಸದಿರುವ ಕಾರಣ ಇವರ ವಿರುದ್ಧ ಶಿಸ್ತು ಕ್ರಮ–ಅಂತಿಮ ಆದೇಶ

**ಓದಲಾಗಿದೆ:** 1. ದಿನಾಂಕ: 06–07–11 ರ ಕಾರಣ ಕೇಳುವ ನೋಟೀಸು ಸಂಖ್ಯೆ: ಸಿಆಸುಇ 097 ಕೆಎಎಲ್ 07

2. ಶ್ರೀ ಎಲ್ ರಾಧಕೃಷ್ಣ, ಕೆಎಎಸ್ (ಆಯ್ಕೆ ಶ್ರೇಣಿ) ಇವರ ಉತ್ತರ ದಿನಾಂಕ: 30–09–11

**ಪ್ರಸ್ತಾವನೆ :**

ಶ್ರೀ ಎಲ್ ರಾಧಾಕೃಷ್ಣ, ಕೆಎಎಸ್ (ಆಯ್ದೆ ಶ್ರೇಣಿ), ಜಂಟೀ ಆಯುಕ್ತರು, ದಾಸರಹಳ್ಳಿ ವಲಯ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು ಇವರು, ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿ, 1966 ರ ನಿಯಮ 23 ರಡಿ ಸಲ್ಲಿಸಿದ್ದ 1997–98 ನೇ ಸಾಲಿನ ಸ್ಥಿರ ಮತ್ತು ಚರಾಸ್ತಿ ವಿವರಗಳನ್ನು ಪರಾಮರ್ಶಿಸಲು ಕೆಲವೊಂದು ಅಂಶಗಳಿಗೆ ಹೆಚ್ಚುವರಿ ಮಾಹಿತಿ ಒದಗಿಸುವಂತೆ, ದಿನಾಂಕ: 19–11–98 ರ ಪತ್ರ ಸಂಖ್ಯೆ: ಸಿಆಸಿ 025 ಸೇಆಆ 93 ಅನ್ನು ಬರೆಯಲಾಗಿತ್ತು. ನಂತರ, ದಿನಾಂಕ: 10–08–2000, 28–11–2001 ರಂದು ನೆನಪೋಲೆಗಳನ್ನು ಬರೆದಿದ್ದು, 1999–2000 ಮತ್ತು 2000–01 ನೇ ಸಾಲುಗಳ ಸ್ಥಿರ ಮತ್ತು ಚರಾಸ್ತಿ ವಿವರಗಳನ್ನು ಸಲ್ಲಿಸುವಂತೆ ತಿಳಿಸಲಾಗಿತ್ತು. ನಂತರ, ದಿನಾಂಕ: 20–09–03 ರಂದು ನೆನಮೋಲೆ ಬರೆಯುತ್ತಾ, 1999–2000 ರಿಂದ 2002–03 ನೇ ಸಾಲುಗಳ ಸ್ಥಿರ ಮತ್ತು ಚರಾಸ್ತಿ ವಿವರಗಳನ್ನು ಸಲ್ಲಿಸುವಂತೆ ತಿಳಿಸಲಾಗಿತ್ತು. ಆದರೆ, ಶ್ರೀ ರಾಧಕೃಷ್ಣ ರವರು ದಿನಾಂಕ: 23–12–04 ರಂದು 2003–04 ನೇ ಸಾಲಿನ ಸ್ಥಿರ ಮತ್ತು ಚರಾಸ್ತಿ ವಿವರಗಳನ್ನು ಮಾತ್ರ ಸಲ್ಲಿಸುತ್ತಾ, ಹೆಚ್ಚುವರಿ ಅಂಶಗಳಿಗೆ ಮಾಹಿತಿ ಸಲ್ಲಿಸಿರುವುದಿಲ್ಲ.

2. ನಂತರ ಈ ಹಿಂದೆ ಕೋರಲಾದ ಹೆಚ್ಚುವರಿ ಅಂಶಗಳಿಗೆ ಮಾಹಿತಿ ನೀಡುವಂತೆಯೂ ಮತ್ತು 1999–2000 ರಿಂದ 2003–04 ನೇ ಸಾಲುಗಳ ಸ್ಥಿರ ಮತ್ತು ಚರಾಸ್ತಿ ವಿವರಗಳನ್ನು ಸಲ್ಲಿಸುವಂತೆ ದಿನಾಂಕ: 01–04–05 ರಂದು ಮತ್ತೊಂದು ಪತ್ರ ಬರೆದಿದ್ದು, ಈ ಪತ್ರಕ್ಕೂ ಯಾವುದೇ ಪ್ರತಿಕ್ರಿಯೆ ಬಾರದ ಕಾರಣ, ಈಗ ಸಲ್ಲಿಸಲು ಬಾಕಿ ಇರುವ ಮಾಹಿತಿಗಳ ಜೊತೆಗೆ 2004–05 ಮತ್ತು 2005–06 ನೇ ಸಾಲುಗಳ ಸ್ಥಿರ ಮತ್ತು ಚರಾಸ್ತಿ ವಿವರಗಳನ್ನು ಒಂದು ವಾರದ ಒಳಗಾಗಿ ಸಲ್ಲಿಸುವಂತೆಯೂ, ಇದಕ್ಕೆ ತಪ್ಪಿದಲ್ಲಿ ನಿಯಮಾನುಸಾರ ಮುಂದಿನ ಕ್ರಮ ಜರುಗಿಸಲಾಗುವುದೆಂದು ದಿನಾಂಕ: 11–05–06 ರಂದು ಪತ್ರ ಬರೆಯಲಾಗಿದೆ. ನಂತರ, ಈ ಎಲ್ಲಾ ಪತ್ರಗಳನ್ನು ಉಲ್ಲೇಖಿಸುತ್ತಾ, ಸಲ್ಲಿಸಲು ಬಾಕಿ ಇರುವ ಮಾಹಿತಿ ಮತ್ತು 2004–05 ರಿಂದ 2006–07 ನೇ ಸಾಲುಗಳ ಸ್ಥಿರ ಮತ್ತು ಚರಾಸ್ತಿ ವಿವರಗಳನ್ನು ವಾರದ ಒಳಗಾಗಿ ಸಲ್ಲಿಸುವಂತೆ ಬರೆಯಲಾದ ದಿನಾಂಕ: 25–06–07 ರ ಪತ್ರಕ್ಕೆ ಅಧಿಕಾರಿಯು 2004–05 ರಿಂದ 2006–07 ನೇ ಸಾಲುಗಳ ಸ್ಥಿರ ಮತ್ತು ಚರಾಸ್ತಿ ವಿವರಗಳನ್ನು ಮಾತ್ರ ಸಲ್ಲಿಸುತ್ತಾ, ಇತರೇ ಮಾಹಿತಿಗಳನ್ನು ಸಲ್ಲಿಸಿರುವುದಿಲ್ಲ.

3. ಈ ಅಧಿಕಾರಿಯು ಸಲ್ಲಿಸಿದ 2004–05 ರಿಂದ 2006–07 ನೇ ಸಾಲುಗಳ ಸ್ಥಿರ ಮತ್ತು ಚರಾಸ್ತಿ ವಿವರಗಳು ಕ್ರೋಢೀಕೃತಗೊಂಡಿದ್ದು, ಅಪೂರ್ಣವಾಗಿದ್ದ ಕಾರಣ ಮತ್ತು 1997–98 ನೇ ಸಾಲಿನ ನಂತರದ ಅವಧಿಯ ಸ್ಥಿರ ಮತ್ತು ಚರಾಸ್ತಿ ವಿವರಗಳು ಪರಾಮರ್ಶಿಸಲು ಬಾಕಿ ಇರುವ ಕಾರಣ, ಎಲ್ಲ ಸಾಲುಗಳ ಸ್ಥಿರ ಮತ್ತು ಚರಾಸ್ತಿ ವಿವರಗಳನ್ನು ಪರಾಮರ್ಶಿಸುವಲ್ಲಿ ಅನಗತ್ಯ ವಿಳಂಬವಾಗುತ್ತಿರುವುದರಿಂದ, ಸಕಾಲದಲ್ಲಿ ವಿವರಗಳನ್ನು ಸಲ್ಲಿಸದಿರುವುದು ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳ ಉಲ್ಲಂಘನೆಯಾಗಿದ್ದು, ಇದಕ್ಕೆ ಒಂದು ವಾರ್ಷಿಕ ವೇತನ ಬಡ್ತಿಯನ್ನು ತಡೆಹಿಡಿಯುವ ದಂಡನೆ ವಿಧಿಸಬಹುದಾಗಿದ್ದು ಮತ್ತು ಈ ವಿಷಯವು ವಿಧಾನ ಮಂಡಲದಲ್ಲಿ ಚರ್ಚೆಯಾಗಿರುವುದನ್ನು ಉಲ್ಲೇಖಿಸುತ್ತಾ, ಸಲ್ಲಿಸಲು ಬಾಕಿ ಇರುವ ಎಲ್ಲ ಮಾಹಿತಿ/ಸ್ಥಿರ ಮತ್ತು ಚರಾಸ್ತಿ ವಿವರಗಳನ್ನು ಹತ್ತು ದಿನಗಳ ಒಳಗಾಗಿ ಸಲ್ಲಿಸುವಂತೆ ದಿನಾಂಕ: 21–11–08 ರಂದು ಅಧಿಕಾರಿಗೆ ಅರೆ ಸರ್ಕಾರಿ ಪತ್ರ ಬರೆಯಲಾಯಿತು. ಈ ಪತ್ರಕ್ಕೂ ಯಾವುದೇ ಪ್ರತಿಕ್ರಿಯೆ ಸದರಿಯವರಿಂದ ಬಾರದ ಕಾರಣ, ದಿನಾಂಕ: 16–04–09, 23–08–10 ಮತ್ತು 01–10–10 ರಂದು ನೆನಪೋಲೆ ಬರೆಯಲಾಯಿತು. ಇದಕ್ಕೂ ಅಧಿಕಾರಿಯಿಂದ ಯಾವುದೇ ಪ್ರತಿಕ್ರಿಯೆ ಬಾರದ ಕಾರಣ, ಸರ್ಕಾರಿ ಪತ್ರಗಳಲ್ಲಿನ ಸೂಚನೆಗಳನ್ನು ಗಂಭೀರವಾಗಿ ಪರಿಗಣಿಸದೇ ತಾತ್ಸಾರ ಧೋರಣೆ ತಳೆದಿರುವ ಅಧಿಕಾರಿಯ ವರ್ತನೆಯ ಬಗ್ಗೆ ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳಡಿ ಶಿಸ್ತು ಕ್ರಮ ಏಕೆ ಕೈಗೊಳ್ಳಬಾರದು ಎಂಬುದಕ್ಕೆ ಹದಿನೈದು ದಿನಗಳ ಒಳಗಾಗಿ ವಿವರಣೆ ಸಲ್ಲಿಸುವಂತೆ ದಿನಾಂಕ: 05–03–11 ರಂದು ಕಾರಣ ಕೇಳುವ ನೋಟೀಸನ್ನು ಜಾರಿಗೊಳಿಸಲಾಯಿತು. ಆಪಾದಿತ ಅಧಿಕಾರಿ ಶ್ರೀ ರಾಧಾಕೃಷ್ಣ ರವರು ಈ ನೋಟೀಸಿಗೂ ವಿವರಣೆ ಸಲ್ಲಿಸಿರುವುದಿಲ್ಲ.

4. ದಿನಾಂಕ: 29–05–2000 ರ ಸುತ್ತೋಲೆ ಸಂಖ್ಯೆ: ಸಿಆಸುಇ 37 ಸೇಆಇ 2000 ರ ಪ್ರಕಾರ ಪ್ರತಿಯೊಬ್ಬ ಸರ್ಕಾರಿ ಅಧಿಕಾರಿಯು ಆಯಾ ವರ್ಷದಲ್ಲಿ ಸಂಪಾದಿಸಿರುವ ಸ್ಥಿರಾಸ್ತಿ ಮಾಹಿತಿ ಸಹಿತ ಅವರ ಸೇವಾವಧಿಯಲ್ಲಿ ಗಳಿಸಿರುವ ಪ್ರತಿಯೊಂದು ಸ್ಥಿರಾಸ್ತಿ ವಿವರಗಳನ್ನು ಕಡ್ಡಾಯವಾಗಿ ನಮೂದಿಸತಕ್ಕದ್ದೆಂದು ತಿಳಿಸಿದ್ದರೂ, ಶ್ರೀ ರಾಧಾಕೃಷ್ಣ, ಕೆಎಎಸ್ ರವರು ಒಬ್ಬ ಜವಾಬ್ದಾರಿಯುತ ಅಧಿಕಾರಿಯಾಗಿ ಈ ಸೂಚನೆಯನ್ನು ಉದ್ದೇಶಪೂರ್ವಕವಾಗಿ ನಿರ್ಲಕ್ಷಿಸಿರುವುದು ಮತ್ತು ಸರ್ಕಾರಿ ಪತ್ರಗಳಲ್ಲಿನ ಸೂಚನೆಗಳನ್ನು ಗಂಭೀರವಾಗಿ ಪರಿಗಣಿಸದೇ ತಾತ್ಸಾರ ಧೋರಣೆ ತಳೆದಿರುವ ವರ್ತನೆಯಿಂದಾಗಿ ಅನಗತ್ಯ ಪತ್ರ ವ್ಯವಹಾರ ನಡೆಯಲು ಕಾರಣಕರ್ತರಾಗಿ, ಸರ್ಕಾರದ ಆರ್ಥಿಕ, ಸಮಯ ಮತ್ತು ಮಾನವ ಸಂಪನ್ಮೂಲವು ಅನಗತ್ಯವಾಗಿ ವ್ಯಯವಾಗಲು ಕಾರಣಕರ್ತರಾಗುವ ಮೂಲಕ ಇವರ ನಡತೆಯು, ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿ, 1966 ರ ನಿಯಮ 3 ಕ್ಕೆ ವಿರುದ್ಧದ ಹಾಗೂ ಒಬ್ಬ ಸರ್ಕಾರಿ ನೌಕರನಿಗೆ ತರವಲ್ಲದ ನಡತೆಯಾಗಿದ್ದು, ಮೇಲೆ ಓದಲಾದ ಕ್ರಮ ಸಂಖ್ಯೆ (1) ರಲ್ಲಿ ಇವರ ವಿರುದ್ಧ ಶಿಸ್ತು ಕ್ರಮವನ್ನು ಪ್ರಾರಂಭಿಸಿ, ದುರ್ನಡತೆಯ ಆರೋಪಕ್ಕೆ ವಿವರಣೆಯೊಂದಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957 ರ ನಿಯಮ 12 ರಡಿ ನೋಟೀಸನ್ನು ಜಾರಿಗೊಳಿಸಲಾಗಿದೆ.

5. ಆರೋಪಿತ ಅಧಿಕಾರಿ ಶ್ರೀ ಎಲ್. ರಾಧಾಕೃಷ್ಣ, ಕೆಎಎಸ್ (ಆಯ್ಕೆ ಶ್ರೇಣಿ) ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (2) ರಲ್ಲಿ ಕಾರ್ಯದ ಒತ್ತಡದಿಂದಾಗಿ ಸಕಾಲದಲ್ಲಿ ವಿವರಗಳನ್ನು ಸಲ್ಲಿಸಿರುವುದಿಲ್ಲವೆಂದೂ, ಹೆಚ್ಚುವರಿ ಮಾಹಿತಿ ಕೋರಿ ಬರೆದ ಸರ್ಕಾರಿ ಪತ್ರಗಳು ನನ್ನ ಕೈ ಸೇರಿರುವುದಿಲ್ಲವೆಂದೂ, ಸುಮಾರು ವರ್ಷಗಳು ಕಳೆದಿರುವುದರಿಂದ ಹಲವಾರು ಮಾಹಿತಿಗಳು ಲಭ್ಯವಿರುವುದಿಲ್ಲವೆಂದೂ ತಿಳಿಸುತ್ತಾ, ಈಗಾಗಲೇ ಸಲ್ಲಿಸಿರುವ ಸ್ಥಿರ ಮತ್ತು ಚರಾಸ್ತಿ ವಿವರಗಳ ಬದಲಿಗೆ ಈಗ ಸಲ್ಲಿಸುತ್ತಿರುವ 1997–98 ರಿಂದ 2010–11 ನೇ ಸಾಲುಗಳ ಸ್ಥಿರ ಮತ್ತು ಚರಾಸ್ತಿ ವಿವರಗಳನ್ನು ಪರಿಗಣಿಸುವಂತೆ ಮತ್ತು ಇನ್ನು ಮುಂದೆ ಯಾವುದೇ ಕಾರಣಕ್ಕೂ ಇಂತಹ ಲೋಪಕ್ಕೆ ಆಸ್ಪದ ನೀಡುವುದಿಲ್ಲವೆಂದು ತಿಳಿಸಿ ಶಿಸ್ತು ಕ್ರಮವನ್ನು ಕೈಬಿಡುವಂತೆ ಮನವಿ ಮಾಡಿರುತ್ತಾರೆ.

6. ಸರ್ಕಾರವು, ದುರ್ನಡತೆಯ ವಿವರಗಳನ್ನು ಮತ್ತು ಆರೋಪಿತ ಅಧಿಕಾರಿಯು ಸಲ್ಲಿಸಿರುವ ಉತ್ತರವನ್ನು ಕೂಲಂಕಷವಾಗಿ ಪರಿಶೀಲಿಸಿ, ಕಛೇರಿ ಕೆಲಸದ ಒತ್ತಡದಿಂದಾಗಿ ಸ್ಥಿರಾಸ್ತಿ ಮತ್ತು ಚರಾಸ್ತಿ ಬಗ್ಗೆ ಸರ್ಕಾರಕ್ಕೆ ಮಾಹಿತಿಯನ್ನು ಸಕಾಲದಲ್ಲಿ ಸಲ್ಲಿಸಲು ಸಾಧ್ಯವಾಗಿರುವುದಿಲ್ಲವೆಂಬ ಆರೋಪಿತ ಅಧಿಕಾರಿಯ ನಿಲುವನ್ನು ಹಾಗೂ ವಿವರಣೆಯನ್ನು ಒಪ್ಪಲು ಸಾಧ್ಯವಿಲ್ಲವೆಂದೂ, ಸ್ಥಿರಾಸ್ತಿ ಮತ್ತು ಚರಾಸ್ತಿ ವಿವರಗಳನ್ನು ಸರ್ಕಾರಕ್ಕೆ ಪ್ರತಿ ವರ್ಷವೂ ಸಕಾಲದಲ್ಲಿ ಸಲ್ಲಿಸುವುದು ಆರೋಪಿತ ಅಧಿಕಾರಿಯ ಜವಾಬ್ದಾರಿಯಾಗಿದ್ದು, ಮಾಡಿರುವ ಲೋಪಕ್ಕಾಗಿ ನೀಡಿರುವ ವಿವರಣೆಯನ್ನು ಒಪ್ಪಲು ಸಾಧ್ಯವಿಲ್ಲವೆಂದು ಅಭಿಪ್ರಾಯಪಡುತ್ತಾ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 097 ಕೆಇವಿ 07, ಬೆಂಗಳೂರು, ದಿನಾಂಕ: 13.01.2012**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957 ರ ನಿಯಮ 12ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಅದೇ ನಿಯಮದ ನಿಯಮ 8(iii) ರ ಪ್ರಕಾರ, ಸರ್ಕಾರವು, ಶ್ರೀ ಎಲ್. ರಾಧಾಕೃಷ್ಣ, ಕೆಎಎಸ್ (ಆಯ್ಕೆ ಶ್ರೇಣಿ), ಜಂಟಿ ಆಯುಕ್ತರು, ದಾಸರಹಳ್ಳಿ, ವಲಯ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು ಇವರ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ಇಲ್ಲದಂತೆ (without cumulative effect) ತಡೆಹಿಡಿಯುವ ದಂಡನೆ ವಿಧಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಡಗಾವ ಬಸವರಾಜ್**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

(ಸೇವೆಗಳು–2)

ಪಿ.ಆರ್. 392

## ಯುವಜನ ಸೇವಾ ಸಚಿವಾಲಯ

**ವಿಷಯ :** ಕೊಡಗು ಜಿಲ್ಲೆಯ ಕೂಡಿಗೆ ಕ್ರೀಡಾ ಶಾಲೆಗೆ ಮುಖ್ಯೋಪಾಧ್ಯಾಯರ ಹುದ್ದೆಯನ್ನು ಸೃಜಿಸುವ ಬಗ್ಗೆ – ಆದೇಶ.

**ಓದಲಾಗಿದೆ :**
1. ದಿನಾಂಕ: 29-06-1982ರ ಇಡಿ 74 ಇಪಿಇ 82 ನೇ ಸಂಖ್ಯೆಯ ಸರ್ಕಾರದ ಆದೇಶ.
2. ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳ ತಿದ್ದುಪಡಿ ಕುರಿತಂತೆ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿರವರ ಅಧ್ಯಕ್ಷತೆಯಲ್ಲಿ ದಿನಾಂಕ: 13-12-2010 ರಂದು ಜರುಗಿದ ಇಲಾಖೆಯ ವೃಂದ ಪರಿಶೀಲನಾ ಸಮಿತಿ ಸಭೆಯ ನಡವಳಿಗಳು.
3. ದಿನಾಂಕ: 11-07-2011ರ ಡಿವೈಎಸ್‌ಎಸ್/ಸಿ1/23/2011-12ನೇ ಸಂಖ್ಯೆಯ ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಯ ನಿರ್ದೇಶಕ ರವರ ಪತ್ರ.
4. ದಿನಾಂಕ: 05-11-2011ರ ಡಿವೈಎಸ್‌ಎಸ್/ಸಿ1/23/2011-12ನೇ ಸಂಖ್ಯೆಯ ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಯ ನಿರ್ದೇಶಕ ರವರ ಪತ್ರ.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ: 29-06-1982ರ ಸರ್ಕಾರಿ ಆದೇಶದಲ್ಲಿ ಕೊಡಗು ಜಿಲ್ಲೆಯ ಕೂಡಿಗೆಯಲ್ಲಿ ಒಂದು ಪೂರ್ಣ ಪ್ರಮಾಣದ ಕ್ರೀಡಾ ಶಾಲೆಯನ್ನು ತೆರೆಯಲು, ಇತರೆ ಹುದ್ದೆಗಳೊಂದಿಗೆ ಒಂದು ಮುಖ್ಯೋಪಾಧ್ಯಾಯರ ಹುದ್ದೆ ಮತ್ತು ಒಂದು ಸಹ ಶಿಕ್ಷಕ ಹುದ್ದೆಯು ಮಂಜೂರಾಗಿದ್ದು, ಈ ಹುದ್ದೆಗಳಿಗೆ ತಗಲುವ ವೆಚ್ಚಗಳನ್ನು ಸಾರ್ವಜನಿಕ ಶಿಕ್ಷಣ ಇಲಾಖೆಯಿಂದ ಭರಿಸುವಂತೆ ಆದೇಶಿಸಲಾಗಿರುತ್ತದೆ.

ಮೇಲೆ (2)ರಲ್ಲಿ ಓದಲಾದ ದಿನಾಂಕ: 13-12-2010 ರಂದು ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳ ತಿದ್ದುಪಡಿ ಕುರಿತಂತೆ ಸರ್ಕಾರದ ಅಪರ ಕಾರ್ಯದರ್ಶಿರವರ ಅಧ್ಯಕ್ಷತೆಯಲ್ಲಿ ನಡೆದ ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಯ ವೃಂದ ಪರಿಶೀಲನಾ ಸಮಿತಿ ಸಭೆಯ ನಡೆವಳಿಯಲ್ಲಿ ಪ್ರಸ್ತುತ ಕೊಡಗು ಜಿಲ್ಲೆಯ ಕೂಡಿಗೆ ಹಾಗೂ ಬೆಂಗಳೂರಿನ ವಿದ್ಯಾನಗರದಲ್ಲಿ ಕ್ರೀಡಾಶಾಲೆಗಳಿದ್ದು, ಎರಡು ಮುಖ್ಯೋಪಾಧ್ಯಾಯರ ಹುದ್ದೆ ಅಗತ್ಯವಿರುವ ಕಾರಣ, ಮತ್ತೊಂದು ಹುದ್ದೆಯನ್ನು ಸೃಜಿಸಿ ಅಳವಡಿಸಬೇಕೆಂದೂ ಮತ್ತು ಇದಕ್ಕೆ ಆರ್ಥಿಕ ಇಲಾಖೆಯ ಅನುಮೋದನೆಯನ್ನು ಪಡೆಯಬೇಕೆಂದು ನಿರ್ಣಯಿಸಲಾಗಿದೆ.

ಹಾಲಿ ಜಾರಿಯಲ್ಲಿರುವ ಕರ್ನಾಟಕ ಸಾಮಾನ್ಯ ಸೇವೆಗಳು (ಯುವಜನ ಸೇವಾ ಮತ್ತು ಕ್ರೀಡಾ ನಿರ್ದೇಶನಾಲಯ) (ನೇಮಕಾತಿ) ನಿಯಮಗಳು-2011ರಲ್ಲಿ ಮುಖ್ಯೋಪಾಧ್ಯಾಯರ 01-ತಾತ್ಕಾಲಿಕ ಹುದ್ದೆಯನ್ನು ವೇತನ ಶ್ರೇಣಿ ರೂ. 11400-21600ರಲ್ಲಿ ತೋರಿಸಲಾಗಿದೆ.

ಕೂಡಿಗೆ ಕ್ರೀಡಾ ಶಾಲೆಯಲ್ಲಿ ಒಟ್ಟು 135 ಕ್ರೀಡಾಪಟುಗಳು ವಾಸವಾಗಿದ್ದು, ಇವರುಗಳ ಯೋಗಕ್ಷೇಮ, ಶಾಲೆಯ ಆಡಳಿತ ವ್ಯವಹಾರ, ಶೈಕ್ಷಣಿಕ ಮತ್ತು ಕ್ರೀಡಾ ಪ್ರಗತಿಯ ಸಂಪೂರ್ಣ ಜವಬ್ದಾರಿಯನ್ನು ಮುಖ್ಯೋಪಾಧ್ಯಾಯರು ವಹಿಸಬೇಕಾಗಿರುವುದರಿಂದ ಹಾಗೂ ಶೈಕ್ಷಣಿಕ ವರ್ಷವು ಪ್ರಾರಂಭವಾಗಿರುವುದರಿಂದ ಇದೊಂದು ವಿಶೇಷ ಮತ್ತು ತುರ್ತು ಪ್ರಕರಣವೆಂದು ಪರಿಗಣಿಸಿ, ಕೂಡಿಗೆ ಕ್ರೀಡಾಶಾಲೆಗೆ ಒಂದು ಮುಖ್ಯೋಪಾಧ್ಯಾಯರ ಹುದ್ದೆಯನ್ನು ವೇತನ ಶ್ರೇಣಿ ರೂ. 11,400-21600 ರಲ್ಲಿ ಸೃಜಿಸಿ ಕೂಡಲೇ ಆದೇಶಿಸುವಂತೆ ಮೇಲೆ (3)ರಲ್ಲಿ ಓದಲಾದ ದಿನಾಂಕ: 11-07-2011 ರ ಪತ್ರದಲ್ಲಿ, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಯ ನಿರ್ದೇಶಕರು ಪ್ರಸ್ತಾಪಿಸಿರುತ್ತಾರೆ.

ಈ ಹಿಂದೆ, ಕೂಡಿಗೆ ಕ್ರೀಡಾ ಶಾಲೆಯಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆಯಿಂದ ನಿಯೋಜನೆ ಮೇಲೆ ಕಾರ್ಯ ನಿರ್ವಹಿಸುತ್ತಿದ್ದ ಮುಖ್ಯೋಪಾಧ್ಯಾಯರಾದ ಶ್ರೀ ಹೆಚ್.ಹೆಚ್. ಸುಂದರ್ ರವರು, ನಿಯೋಜನೆ ಅವಧಿ ಮುಗಿದ ಕಾರಣ 1992ರಲ್ಲಿ ಮಾತೃ ಇಲಾಖೆಗೆ ಹಿಂದಿರುಗಿರುತ್ತಾರೆ ಮತ್ತು ಕ್ರೀಡಾ ಶಾಲೆಯ ಹೊಣೆಗಾರಿಕೆಯನ್ನು ಹಿರಿಯ ಅಧ್ಯಾಪಕಿಯಾದ ಶ್ರೀಮತಿ ಪಿ. ಕುಂತಿ ಕುಮಾರಿ ಇವರಿಗೆ ವಹಿಸಿಕೊಟ್ಟಿದ್ದು, ಮುಖ್ಯೋಪಾಧ್ಯಾಯರ ದೈನಂದಿನ ಕಾರ್ಯ ಚಟುವಟಿಕೆಗಳನ್ನು ಸದರಿಯವರು ನಿರ್ವಹಿಸುತ್ತಾ ಬಂದಿರುತ್ತಾರೆ. ನಂತರದಲ್ಲಿ ಮುಖ್ಯೋಪಾಧ್ಯಾಯರ ಹುದ್ದೆಯನ್ನು ಭರ್ತಿ ಮಾಡುವುದು, ಅದಕ್ಕೆ ಸಂಬಂಧಿಸಿದ ವೆಚ್ಚಗಳನ್ನು ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಯಿಂದ ಭರಿಸುವ ಯಾವುದೇ ಕ್ರಮ ಕೈಗೊಂಡಿರುವುದಿಲ್ಲ. ದಿನಾಂಕ: 05-04-2011 ರಂದು ಪ್ರಕಟಗೊಂಡ ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಒಂದು ಮುಖ್ಯೋಪಾಧ್ಯಾಯರ ಹುದ್ದೆ ಮಾತ್ರ ಇದೆ ಹಾಗೂ 2010-11ನೇ ಸಾಲಿನ ಅಪೆಂಡಿಕ್ಸ್-ಬಿ ಯಲ್ಲಿಯೂ ಸಹಾ ಕ್ರೀಡಾ ಶಾಲೆಯ ಒಂದೇ ಮುಖ್ಯೋಪಾಧ್ಯಾಯರ ಹುದ್ದೆ ಇರುವುದಾಗಿ ನಮೂದಿಸಲಾಗಿದೆ.

ಮೇಲ್ಕಂಡ ವಿವರಗಳ ಹಿನ್ನೆಲೆಯಲ್ಲಿ, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಯ ನಿರ್ದೇಶಕರು, ಮೇಲೆ ಓದಲಾದ (4)ರ ಪತ್ರದ ಮೂಲಕ ಸರ್ಕಾರಕ್ಕೆ ವಿವರವಾದ ಪ್ರಸ್ತಾವನೆಯನ್ನು ಸಲ್ಲಿಸಿ, ದಿನಾಂಕ: 29-06-1982ರ ಸರ್ಕಾರಿ ಆದೇಶ ಸಂಖ್ಯೆ ಇಡಿ 74 ಇಪಿಇ 82 ರಲ್ಲಿ ಸೃಜಿಸಲಾಗಿರುವ ಕೂಡಿಗೆ ಕ್ರೀಡಾ ಶಾಲೆಯ ಮುಖ್ಯೋಪಾಧ್ಯಾಯ ಹುದ್ದೆಯು ರದ್ದಾಗಿರುವ ಬಗ್ಗೆ ಯಾವುದೇ ಆದೇಶಗಳು, ದಾಖಲೆಗಳು ಲಭ್ಯವಿರದ ಕಾರಣ ಈ ಹುದ್ದೆಯನ್ನು ಮುಂದುವರೆಸಿ, ಈ ಹುದ್ದೆಗೆ ಸಂಬಂಧಿಸಿದ ವೆಚ್ಚವನ್ನು ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಯಿಂದಲೇ ಭರಿಸಲು ಮತ್ತು ಇಲಾಖೆಯ ಪ್ರಸಕ್ತ ವೃಂದ ಮತ್ತು ನೇಮಕಾತಿ ನಿಯಮಾವಳಿಗಳಲ್ಲಿ ಅಳವಡಿಸಿ ಸೂಕ್ತ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಯುಸೇಇ 64 ಯುಇಸೇ 09 ಬೆಂಗಳೂರು, ದಿನಾಂಕ: 19-01-2012**

ಪ್ರಸ್ತಾವನೆಯಲ್ಲಿನ ವಿವರಣೆಗಳ ಹಿನ್ನೆಲೆಯಲ್ಲಿ, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಯ ವ್ಯಾಪ್ತಿಗೊಳಪಡುವ ಕೊಡಗು ಜಿಲ್ಲೆಯ ಕೂಡಿಗೆ ಕ್ರೀಡಾ ಶಾಲೆಯಲ್ಲಿ ವೇತನ ಶ್ರೇಣಿ ರೂ. 11400-21600 ರಲ್ಲಿ ಮುಖ್ಯೋಪಾಧ್ಯಾಯರ ಒಂದು ಹುದ್ದೆಯನ್ನು ಹೊಸದಾಗಿ ಸೃಜಿಸಲು ಈ ಮೂಲಕ ಆದೇಶಿಸಲಾಗಿದೆ.

ಈ ಆದೇಶವನ್ನು, ದಿನಾಂಕ: 05-01-2012ರ ಆ.ಇ. 1119 ವೆಚ್ಚ-7/2011ನೇ ಸಂಖ್ಯೆಯ ಅನಧಿಕೃತ ಟಿಪ್ಪಣಿಯ ಮೂಲಕ ಆರ್ಥಿಕ ಇಲಾಖೆ (ವೆಚ್ಚ-7 ಮತ್ತು 8) ನೀಡಿರುವ ಸಹಮತದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಸಿ. ಶ್ರೀನಿವಾಸ್**
ಸರ್ಕಾರದ ಅಧೀನ ಕಾರ್ಯದರ್ಶಿ
ಯುವಜನ ಸೇವಾ ಇಲಾಖೆ

ಪಿ.ಆರ್. 399

## ಶಿಕ್ಷಣ ಸಚಿವಾಲಯ

**ವಿಷಯ :** ತಾಂತ್ರಿಕ ಶಿಕ್ಷಣ ಇಲಾಖೆಯಲ್ಲಿ ಖಾಲಿ ಇರುವ ಸಹಾಯಕ (ಗ್ರೂಪ್ ಡಿ) ಹುದ್ದೆಗಳನ್ನು ನೇರನೇಮಕಾತಿ ಮೂಲಕ ಭರ್ತಿ ಮಾಡುವ ಕುರಿತು.

**ಓದಲಾಗಿದೆ :**
1. ತಾಂತ್ರಿಕ ಶಿಕ್ಷಣ ನಿರ್ದೇಶಕರ ಅಧಿಸೂಚನೆ ಸಂಖ್ಯೆ: ಡಿಟಿಇ 15 ಇಎಸ್‌ಟಿ (3)/07 ದಿನಾಂಕ: 19–02–2008.
2. ತಾಂತ್ರಿಕ ಶಿಕ್ಷಣ ನಿರ್ದೇಶಕರ ಪತ್ರ ಸಂಖ್ಯೆ: ಡಿಟಿಇ 15 ಇಎಸ್‌ಟಿ (3)/07 ದಿನಾಂಕ: 12–11–2009 (ಪುಟ 3)
3. ತಾಂತ್ರಿಕ ಶಿಕ್ಷಣ ನಿರ್ದೇಶಕರ ಪತ್ರ ಸಂಖ್ಯೆ ಡಿಟಿಇ 15 ಇಎಸ್‌ಟಿ (3)/07/2937 ದಿನಾಂಕ: 17–11–2009. (ಪುಟ 14)
4. ಸರ್ಕಾರಿ ಪತ್ರ ಸಂಖ್ಯೆ: ಇಡಿ 295 ಟಿಪಿಇ 2009 ದಿನಾಂಕ: 16–02–2010.
5. ತಾಂತ್ರಿಕ ಶಿಕ್ಷಣ ನಿರ್ದೇಶಕರ ಪತ್ರ ಸಂಖ್ಯೆ ಡಿಟಿಇ 15 ಇಎಸ್‌ಟಿ (3)/07/26 ದಿನಾಂಕ: 06–4–2010. (ಪುಟ 276)
6. ಸರ್ಕಾರದ ಪತ್ರ ಸಂಖ್ಯೆ: ಇಡಿ 295 ಟಿಪಿಇ 2009 ದಿನಾಂಕ: 15–03–2011.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ಅಧಿಸೂಚನೆಯಲ್ಲಿ ತಾಂತ್ರಿಕ ಶಿಕ್ಷಣ ನಿರ್ದೇಶಕರು, ತಮ್ಮ ಇಲಾಖೆಯ ವ್ಯಾಪ್ತಿಗೆ ಬರುವ ಸರ್ಕಾರಿ ಇಂಜಿನಿಯರಿಂಗ್ ಕಾಲೇಜು ಮತ್ತು ಸರ್ಕಾರಿ ಪಾಲಿಟೆಕ್ನಿಕ್‌ಗಳಲ್ಲಿ ಖಾಲಿ ಇರುವ 241 ಸಹಾಯಕ (ಗ್ರೂಪ್–ಡಿ) ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ಅರ್ಜಿಗಳನ್ನು ಆಹ್ವಾನಿಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಪತ್ರದಲ್ಲಿ ಈ ಅಧಿಸೂಚನೆಗೆ ನೇಮಕಾತಿ ಕೋರಿ ಸುಮಾರು 23000 ಅರ್ಜಿಗಳು ಸ್ವೀಕೃತವಾಗಿದ್ದು, ಅರ್ಜಿ ಸಲ್ಲಿಸಿದ ಅಭ್ಯರ್ಥಿಗಳ ವಿದ್ಯಾರ್ಹತೆ / ಸೇವಾನುಭವ ಇತ್ಯಾದಿಗಳನ್ನು ಆಯಾ ಟ್ರೇಡ್‌ಗಳ ತಜ್ಞರ ಸಮಿತಿಯಿಂದ ಪರಿಶೀಲಿಸಲಾಗಿ ಅರ್ಜಿ ಸಲ್ಲಿಸಿರುವವರ ಪೈಕಿ 4672 ಅರ್ಜಿಗಳು ಪುರಸ್ಕೃತಗೊಂಡು ಉಳಿದ 18074 ಅರ್ಜಿಗಳು ತಿರಸ್ಕೃತಗೊಂಡಿರುವುದಾಗಿ ತಿಳಿಸಿರುತ್ತಾರೆ. ತಾಂತ್ರಿಕ ಶಿಕ್ಷಣ ಇಲಾಖೆಯ ಇಲಾಖಾ ವೃಂದ ಮತ್ತು ನೇಮಕಾತಿ ನಿಯಮಗಳು 2006ರಲ್ಲಿ ಸಹಾಯಕ ಹುದ್ದೆಗಳಲ್ಲಿ ಈ ಕೆಳಕಂಡಂತಹ ನೇಮಕಾತಿ ನಿಯಮಗಳನ್ನು ರೂಪಿಸಲಾಗಿರುತ್ತದೆ.

1. Must have passed S.S.L.C. and
2. Must have put in a service of not less than one year in appropriate trade of Engineering/Technology.
3. In case of candidate applying for Automobile subjects must have posses Current Heavy duty Driving Licence.

ಮುಂದುವರೆದು, ತಾಂತ್ರಿಕ ಶಿಕ್ಷಣ ನಿರ್ದೇಶಕರು ಕರ್ನಾಟಕ ಸಿವಿಲ್ ಸೇವೆಗಳು (ನೇರ ನೇಮಕಾತಿ ಸ್ಪರ್ಧಾತ್ಮಕ ಪರೀಕ್ಷೆ ಮತ್ತು ಆಯ್ಕೆ (ಸಾಮಾನ್ಯ) ನೇಮಕಾತಿಯ ನಿಯಮ 2006ರಲ್ಲಿ ಗ್ರೂಪ್–ಡಿ ಹುದ್ದೆಗಳನ್ನು ಭರ್ತಿ ಮಾಡುವ ಸಂಬಂಧ ಕೆಳಕಂಡಂತೆ ನಿಯಮ ರೂಪಿಸಲಾಗಿದ್ದು ಅದರ ಉದ್ಧೃತ ಭಾಗ ಈ ಕೆಳಕಂಡಂತಿದೆ:

(1) Notwithstanding anything contained in these rules, or the rules of recruitment specially made in respect of any service or posts, the recruitment to the post of Drivers in Group C and those in Group D shall be made by the appointing authority in the order of merit on the basis of aggregate of the percentage of total marks secured by the candidates in the qualifying examination specified in the rules of recruitment taking in the consideration the orders in force relating to reservation. If two or more candidates secure equal percentage of marks in the qualifying examination, the order of merit of such candidates shall be fixed on the basis of their age, the person older in age being placed higher in the order of merit.

ಈ ಅಧಿಸೂಚನೆಯನ್ವಯ ಎಲ್ಲಾ ಹುದ್ದೆಗಳನ್ನು ಮೆರಿಟ್ ಆಧಾರದ ಮೇಲೆ ಮಾತ್ರ ಭರ್ತಿ ಮಾಡಲು ಅವಕಾಶ ಕಲ್ಪಿಸಲಾಗಿದ್ದು ಎಸ್.ಎಸ್.ಎಲ್.ಸಿ. ವಿದ್ಯಾರ್ಹತೆಯಲ್ಲಿ ಪಡೆದ ಒಟ್ಟು ಅಂಕಗಳ ಮೆರಿಟ್ ಆಧಾರದ ಮೇರೆಗೆ ಹಾಗೂ ಸೇವಾನುಭವದ ಕುರಿತು ಸಂದರ್ಶನದಲ್ಲಿ ನೀಡಲಾಗುವ ಒಟ್ಟು ಅಂಕಗಳನ್ನು (50+50) ಆಧರಿಸಿ ಮೆರಿಟ್‌ನ್ನು ನಿಗಧಿಪಡಿಸುವ ಮೂಲಕ ಹಾಗೂ ಎಲ್ಲಾ ಮೂಲ ದಾಖಲೆಗಳನ್ನು ಪರಿಶೀಲಿಸಿ 1:5ರ ಅನುಪಾತದಲ್ಲಿ ಅಭ್ಯರ್ಥಿಗಳನ್ನು ಸಂದರ್ಶನಕ್ಕೆ ಕರೆದು ಆಯ್ಕೆ ಮಾಡಲು ಕರ್ನಾಟಕ ನಾಗರೀಕ ಸೇವೆಗಳು (ನೇರ ನೇಮಕಾತಿ ಸ್ಪರ್ಧಾತ್ಮಕ ಪರೀಕ್ಷೆ ಮತ್ತು ಆಯ್ಕೆ (ಸಾಮಾನ್ಯ) ನೇಮಕಾತಿಯ ನಿಯಮ 2006ರ ನಿಯಮಗಳನ್ನು ಸಡಿಲಿಸಿ ಸರ್ಕಾರದ ಆದೇಶವನ್ನು ಹೊರಡಿಸಲು ಕೋರಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಪತ್ರದಲ್ಲಿ ದಿನಾಂಕ: 16–11–2009ರಂದು ತಾಂತ್ರಿಕ ಶಿಕ್ಷಣ ಇಲಾಖೆಯಲ್ಲಿ ಖಾಲಿ ಇರುವ ಕಾರ್ಯಗಾರ ಸಹಾಯಕ (ಗ್ರೂಪ್–ಡಿ) ಇವರ ನೇರ ನೇಮಕಾತಿ ಕುರಿತು ಇಲಾಖಾ ನೇಮಕಾತಿ ಸಮಿತಿಯ ಪೂರ್ವಭಾವಿ ಸಮಿತಿಯ ನಡವಳಿಗಳನ್ನು ಸರ್ಕಾರದ ಅವಗಾಹನೆಗಾಗಿ ಸಲ್ಲಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ: (4)ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರಿ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 19 ಎಸ್‌ಇಆರ್ 2006 ದಿನಾಂಕ: 14–08–2006ರ ನಿಯಮಗಳ ಸಡಿಲಿಕೆಗೆ ಸಮರ್ಥನೀಯ ಕಾರಣಗಳನ್ನು ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಸಂದರ್ಶನಕ್ಕೆ ಅವಕಾಶ ಇಲ್ಲದಿರುವ ಬಗ್ಗೆ ಹಾಗೂ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಅರ್ಜಿ ಸಂಖ್ಯೆ: 792/2007ರ ಮೇಲೆ ನೀಡಿರುವ ತೀರ್ಪು. ಸರ್ವೋಚ್ಚ ನ್ಯಾಯಾಲಯವು ಅಶೋಕ್‌ಕುಮಾರ್ ಯಾದವ್ ವಿರುದ್ಧ ಹರಿಯಾಣ ರಾಜ್ಯ ಪ್ರಕರಣದಲ್ಲಿ ನೀಡಿರುವ ತೀರ್ಪನ್ನು ಹಾಗೂ ಸರ್ವೋಚ್ಚ ನ್ಯಾಯಾಲಯವು ಆಂಧ್ರಪ್ರದೇಶ ಲೋಕಸೇವಾ ಆಯೋಗ ವಿರುದ್ಧ ಬಿ. ಸ್ವಪ್ನಾ ಇವರ ಪ್ರಕರಣದಲ್ಲಿ ನೀಡಿರುವ ತೀರ್ಪುಗಳನ್ನು ನಿರ್ದೇಶನಾಲಯ ಪರಿಶೀಲಿಸಿ ಸೂಕ್ತ ಪ್ರಸ್ತಾವನೆಯನ್ನು ಸಲ್ಲಿಸುವಂತೆ ಕೋರಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (5)ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರಿ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 19 ಎಸ್‌ಸಿಆರ್ 2006 ದಿನಾಂಕ: 14–08–2006ರ ನಿಯಮಗಳ ಸಡಿಲಿಕೆಗೆ ಸಮರ್ಥನೀಯ ಕಾರಣಗಳೇನೂ ಇಲ್ಲದಿದ್ದರೂ ಸಹ ತಾಂತ್ರಿಕ ಶಿಕ್ಷಣ ಸಂಸ್ಥೆಗಳ ಕಾರ್ಯಗಾರ ವಿಭಾಗಕ್ಕೆ

| | | |
|---|---|---|
| 3 | ಕಾರ್ಯನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯತ್, ಸಂಬಂಧಿಸಿದ ತಾಲ್ಲೂಕು | ಸದಸ್ಯರು |
| 4 | ತಹಶೀಲ್ದಾರ್, ಸಂಬಂಧಿಸಿದ ತಾಲ್ಲೂಕು, ಬೆಂಗಳೂರು ನಗರ ಜಿಲ್ಲೆ | ಸದಸ್ಯ ಕಾರ್ಯದರ್ಶಿ |

ಮುಂದುವರೆದು, ನಾಲ್ಕು ಅಧಿಕಾರೇತರ ಸದಸ್ಯರನ್ನು ನಂತರ ನಾಮ ನಿರ್ದೇಶನ ಮಾಡಲಾಗುವುದೆಂದು ನಮೂದಿಸಲಾಗಿತ್ತು.

ಆ ಹಿನ್ನೆಲೆಯಲ್ಲಿ ಪರಿಶೀಲಿಸಿ, ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 87 ಮುಸರ 2011, ಬೆಂಗಳೂರು, ದಿನಾಂಕ 05–01–2012**

ಬೆಂಗಳೂರು ನಗರ ಜಿಲ್ಲೆಯ ಗಾಂಧಿನಗರ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಗೆ ಈ ಕೆಳಕಂಡಂತೆ ಅಧಿಕಾರೇತರ ಸದಸ್ಯರನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ನಾಮ ನಿರ್ದೇಶನ ಮಾಡಲಾಗಿದೆ.

| ಕ್ರಮ ಸಂ. | ಹೆಸರು/ವಿಳಾಸ | ಪ್ರವರ್ಗ |
|---|---|---|
| 1 | ಶ್ರೀ ಮಲ್ಲು<br>ನಂ. 24, 2ನೇ ಮುಖ್ಯರಸ್ತೆ, 7ನೇ ಅಡ್ಡರಸ್ತೆ,<br>ಕೆ.ಪಿ. ಅಗ್ರಹಾರ ಗೌರೇಶ್ವರಿನಗರ, ಬೆಂಗಳೂರು–23 | ಸಾಮಾನ್ಯ |
| 2 | ಶ್ರೀಮತಿ ಸುಜಯ ನಾಗೇಂದ್ರ<br>ನಂ. 26, ಆಂಜನೇಯ ದೇವಸ್ಥಾನದ 1ನೇ ಬೀದಿ<br>ಶೇಷಾದ್ರಿಪುರಂ, ಬೆಂಗಳೂರು–10 | ಮಹಿಳೆ |
| 3 | ಶ್ರೀ ನಾರಾಯಣಪ್ಪ,<br>ನಂ. 208/ಎ, ವಿವೇಕಾನಂದ ಬ್ಲಾಕ್<br>ದತ್ತಾತ್ರೇಯ ದೇವಸ್ಥಾನದ ರಸ್ತೆ,<br>ಪೈಪ್‌ಲೈನ್, ಮಲ್ಲೇಶ್ವರಂ, ಬೆಂಗಳೂರು–03 | ಪರಿಶಿಷ್ಟ ಜಾತಿ |
| 4 | ಶ್ರೀ ವೈ. ಬಸವರಾಜ<br>ನಂ. 23/1, ಮಾಗಡಿ ರಸ್ತೆ ಕೆ.ಪಿ. ಅಗ್ರಹಾರ<br>ಬೆಂಗಳೂರು–23 | ಪರಿಶಿಷ್ಟ ಪಂಗಡ |

ಸದರಿ ಸಮಿತಿಯ ಅಧಿಕಾರೇತರ ಸದಸ್ಯರು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 2 ಎಸ್‌ಆರ್‌ಎ 2000, ದಿನಾಂಕ: 03–02–2001ರ ಪ್ರಕಾರ ಸಂಬಂಧಪಟ್ಟ ಭತ್ಯೆಗಳನ್ನು ಪಡೆಯಲು ಅರ್ಹರಿರುತ್ತಾರೆ.

ಈ ಸಮಿತಿಯು ಐದು ವರ್ಷ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ; ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಅಸ್ತಿತ್ವದಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ. ಉಮಾಪತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಮುಜರಾಯಿ)

ಪಿ.ಆರ್. 410

## ಕಂದಾಯ ಸಚಿವಾಲಯ

**ವಿಷಯ :** ಬೆಂಗಳೂರು ನಗರ ಜಿಲ್ಲೆಯ ಮಲ್ಲೇಶ್ವರಂ ವಿಧಾನ ಸಭಾ ಕ್ಷೇತ್ರಕ್ಕೆ ಆರಾಧನಾ ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ :** ಸರ್ಕಾರದ ಆದೇಶ ಸಂಖ್ಯೆ ಕಂಇ 32 ಮುಸರ 2009, ದಿನಾಂಕ: 25–02–2009.

**ಪ್ರಸ್ತಾವನೆ :**

ಮೇಲೆ ಓದಲಾದ ಆದೇಶದಲ್ಲಿ ಬೆಂಗಳೂರು ನಗರ ಜಿಲ್ಲೆಯ ಮಲ್ಲೇಶ್ವರಂ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಯನ್ನು ಈ ಕೆಳಕಂಡವರೊಂದಿಗೆ ರಚಿಸಿ ಆದೇಶಿಸಲಾಗಿತ್ತು.

| | | |
|---|---|---|
| 1 | ಮಾನ್ಯ ವಿಧಾನಸಭಾ ಸದಸ್ಯರು, ಮಲ್ಲೇಶ್ವರಂ ವಿಧಾನಸಭಾ ಕ್ಷೇತ್ರ | ಅಧ್ಯಕ್ಷರು |
| 2 | ಕಾರ್ಯನಿರ್ವಾಹಕ ಅಭಿಯಂತರರು, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ಬೆಂಗಳೂರು ನಗರ ಜಿಲ್ಲೆ | ಸದಸ್ಯರು |
| 3 | ಕಾರ್ಯನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯತ್, ಸಂಬಂಧಿಸಿದ ತಾಲ್ಲೂಕು | ಸದಸ್ಯರು |
| 4 | ತಹಶೀಲ್ದಾರ್, ಸಂಬಂಧಿಸಿದ ತಾಲ್ಲೂಕು, ಬೆಂಗಳೂರು ನಗರ ಜಿಲ್ಲೆ | ಸದಸ್ಯ ಕಾರ್ಯದರ್ಶಿ |

ಮುಂದುವರೆದು, ನಾಲ್ಕು ಅಧಿಕಾರೇತರ ಸದಸ್ಯರನ್ನು ನಂತರ ನಾಮ ನಿರ್ದೇಶನ ಮಾಡಲಾಗುವುದೆಂದು ನಮೂದಿಸಲಾಗಿತ್ತು.

ಈ ಹಿನ್ನೆಲೆಯಲ್ಲಿ ಪರಿಶೀಲಿಸಿ, ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 68 ಮುಸರ 2011, ಬೆಂಗಳೂರು, ದಿನಾಂಕ 05-01-2012**

ಬೆಂಗಳೂರು ನಗರ ಜಿಲ್ಲೆಯ ಮಲ್ಲೇಶ್ವರಂ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಗೆ ಈ ಕೆಳಕಂಡಂತೆ ಅಧಿಕಾರೇತರ ಸದಸ್ಯರನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ನಾಮ ನಿರ್ದೇಶನ ಮಾಡಲಾಗಿದೆ.

| ಕ್ರಮ ಸಂ. | ಹೆಸರು/ವಿಳಾಸ | ಪ್ರವರ್ಗ |
|---|---|---|
| 1 | ಶ್ರೀ ಕೃಷ್ಣಪ್ಪ<br>ನಂ. 43, 12/ಎ, 14ನೇ ಮುಖ್ಯರಸ್ತೆ<br>1ನೇ ಅಡ್ಡರಸ್ತೆ, ಸುಬ್ರಹ್ಮಣ್ಯನಗರ, ಬೆಂಗಳೂರು-21 | ಸಾಮಾನ್ಯ |
| 2 | ಶ್ರೀಮತಿ ಶ್ರೀಲತಾ ಪೂರ್ಣಚಂದ್ರ<br>ನಂ. 109, 11ನೇ ಮುಖ್ಯರಸ್ತೆ<br>15ನೇ ಅಡ್ಡರಸ್ತೆ, ಮಲ್ಲೇಶ್ವರಂ, ಬೆಂಗಳೂರು-03 | ಮಹಿಳೆ |
| 3 | ಶ್ರೀಮತಿ ಮರಿಯಮ್ಮ<br>ನಂ. 12, 17ನೇ ಮುಖ್ಯ ರಸ್ತೆ,<br>12ನೇ ಅಡ್ಡರಸ್ತೆ, ಮಲ್ಲೇಶ್ವರಂ, ಬೆಂಗಳೂರು-03 | ಪರಿಶಿಷ್ಟ ಜಾತಿ |
| 4 | ಶ್ರೀ ನಾಗರಾಜ<br>ನಂ. 1534, ರತ್ನಸಿರಿ ಅಪಾರ್ಟ್‌ಮೆಂಟ್<br>9ನೇ ಮುಖ್ಯರಸ್ತೆ, ಎ ಬ್ಲಾಕ್, ಸುಬ್ರಹ್ಮಣ್ಯನಗರ<br>ರಾಜಾಜಿನಗರ, ಬೆಂಗಳೂರು-10 | ಪರಿಶಿಷ್ಟ ಪಂಗಡ |

ಸದರಿ ಸಮಿತಿಯ ಅಧಿಕಾರೇತರ ಸದಸ್ಯರು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 2 ಎಸ್‌ಆರ್‌ಎ 2000, ದಿನಾಂಕ: 03-02-2001ರ ಪ್ರಕಾರ ಸಂಬಂಧಪಟ್ಟ ಭತ್ಯೆಗಳನ್ನು ಪಡೆಯಲು ಅರ್ಹರಿರುತ್ತಾರೆ.

ಈ ಸಮಿತಿಯು ಐದು ವರ್ಷ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ; ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಅಸ್ತಿತ್ವದಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ. ಉಮಾಪತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 411 ಕಂದಾಯ ಇಲಾಖೆ (ಮುಜರಾಯಿ)

## ಕಂದಾಯ ಸಚಿವಾಲಯ

**ವಿಷಯ :** ಹಾಸನ ಜಿಲ್ಲೆಯ ಹೊಳೆನರಸೀಪುರ ವಿಧಾನ ಸಭಾ ಕ್ಷೇತ್ರಕ್ಕೆ ಆರಾಧನಾ ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ :** ಸರ್ಕಾರದ ಆದೇಶ ಸಂಖ್ಯೆ ಕಂಇ 75 ಮುಸರ 2008, ದಿನಾಂಕ: 25-02-2009.

**ಪ್ರಸ್ತಾವನೆ :**

ಮೇಲೆ ಓದಲಾದ ಆದೇಶದಲ್ಲಿ ಹಾಸನ ಜಿಲ್ಲೆಯ ಹೊಳೆನರಸೀಪುರ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಯನ್ನು ಈ ಕೆಳಕಂಡವರೊಂದಿಗೆ ರಚಿಸಿ ಆದೇಶಿಸಲಾಗಿತ್ತು.

| | | |
|---|---|---|
| 1 | ಮಾನ್ಯ ವಿಧಾನಸಭಾ ಸದಸ್ಯರು, ಹೊಳೆನರಸೀಪುರ ವಿಧಾನಸಭಾ ಕ್ಷೇತ್ರ | ಅಧ್ಯಕ್ಷರು |
| 2 | ಕಾರ್ಯನಿರ್ವಾಹಕ ಅಭಿಯಂತರರು, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ಹಾಸನ ಜಿಲ್ಲೆ | ಸದಸ್ಯರು |
| 3 | ಕಾರ್ಯನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯತ್, ಹೊಳೆನರಸೀಪುರ ತಾಲ್ಲೂಕು | ಸದಸ್ಯರು |
| 4 | ತಹಶೀಲ್ದಾರ್, ಹೊಳೆನರಸೀಪುರ ತಾಲ್ಲೂಕು, ಹಾಸನ ಜಿಲ್ಲೆ | ಸದಸ್ಯ ಕಾರ್ಯದರ್ಶಿ |

ಮುಂದುವರೆದು, ನಾಲ್ಕು ಅಧಿಕಾರೇತರ ಸದಸ್ಯರನ್ನು ನಂತರ ನಾಮ ನಿರ್ದೇಶನ ಮಾಡಲಾಗುವುದೆಂದು ನಮೂದಿಸಲಾಗಿತ್ತು.

ಈ ಹಿನ್ನೆಲೆಯಲ್ಲಿ ಪರಿಶೀಲಿಸಿ, ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 23 ಮುಸರ 2011, ಬೆಂಗಳೂರು, ದಿನಾಂಕ 05-01-2012**

ಹಾಸನ ಜಿಲ್ಲೆ ಹೊಳೆನರಸೀಪುರ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಗೆ ಈ ಕೆಳಕಂಡಂತೆ ಅಧಿಕಾರೇತರ ಸದಸ್ಯರನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ನಾಮ ನಿರ್ದೇಶನ ಮಾಡಲಾಗಿದೆ.

| ಕ್ರಮ ಸಂ. | ಹೆಸರು/ವಿಳಾಸ | ಪ್ರವರ್ಗ |
|---|---|---|
| 1 | ಶ್ರೀ ಜಿ.ಕೆ. ಜಯರಾಂ ಬಿನ್ ಕೃಷ್ಣಪ್ಪ<br>ಗಂಗೂರು, ದೊಡ್ಡ ಬ್ಯಾಗತವಳ್ಳಿ ಅಂಚೆ, ಕಸಬಾ ಹೋಬಳಿ,<br>ಹೊಳೆನರಸೀಪುರ ತಾಲ್ಲೂಕು, ಹಾಸನ ಜಿಲ್ಲೆ | ಸಾಮಾನ್ಯ |

| | | |
|---|---|---|
| 2 | ಶ್ರೀಮತಿ ನೇತ್ರಾವತಿ ಬಿನ್ ನಾರಾಯಣನಾಯಕ ದೊಡ್ಡಹಳ್ಳಿ ಹಳ್ಳಿ ಮೈಸೂರು ಅಂಚೆ ಮತ್ತು ಹೋಬಳಿ, ಹೊಳೆನರಸೀಪುರ ತಾಲ್ಲೂಕು, ಹಾಸನ ಜಿಲ್ಲೆ | ಮಹಿಳೆ |
| 3 | ಶ್ರೀ ಶೇಖರ್ ಬಿನ್ ತಿಮ್ಮಯ್ಯ ಕಲ್ಲುಬ್ಯಾಡರಹಳ್ಳಿ, ಎಲೆಚಾಗಹಳ್ಳಿ, ಕಸಬಾ ಹೋಬಳಿ ಹೊಳೆನರಸೀಪುರ ತಾಲ್ಲೂಕು, ಹಾಸನ ಜಿಲ್ಲೆ | ಪರಿಶಿಷ್ಟ ಜಾತಿ |
| 4 | ಶ್ರೀ ಸೋಮನಾಯಕ ಸಿಂಗಾಪುರ ಗ್ರಾಮ, ಜಕ್ಕವಳ್ಳಿ, ಅಂಚೆ, ಕಸಬಾ ಹೋಬಳಿ, ಹೊಳೆನರಸೀಪುರ ತಾಲ್ಲೂಕು, ಹಾಸನ ಜಿಲ್ಲೆ | ಪರಿಶಿಷ್ಟ ಪಂಗಡ |

ಸದರಿ ಸಮಿತಿಯ ಅಧಿಕಾರೇತರ ಸದಸ್ಯರು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 2 ಎಸ್‌ಆರ್‌ಎ 2000, ದಿನಾಂಕ: 03–02–2001ರ ಪ್ರಕಾರ ಸಂಬಂಧಪಟ್ಟ ಭತ್ಯೆಗಳನ್ನು ಪಡೆಯಲು ಅರ್ಹರಿರುತ್ತಾರೆ.

ಈ ಸಮಿತಿಯು ಐದು ವರ್ಷ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ; ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಅಸ್ತಿತ್ವದಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ. ಉಮಾಪತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 412 ಕಂದಾಯ ಇಲಾಖೆ (ಮುಜರಾಯಿ)

## ಕಂದಾಯ ಸಚಿವಾಲಯ

**ವಿಷಯ :** ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಜಾಲ ಹೋಬಳಿ, ಹೊಸಹಳ್ಳಿ ಗ್ರಾಮದ ಸ.ನಂ. 21ರಲ್ಲಿ 4.24 ಎಕರೆ ಜಮೀನನ್ನು ವೈ.ಎ.ಎನ್ ಚ್ಯಾರಿಟೆಬಲ್ ಟ್ರಸ್ಟ್ ಇವರಿಗೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** 1) ಅಧ್ಯಕ್ಷರು, ವೈ.ಎ.ಎನ್ ಚಾರಿಟೆಬಲ್ ಟ್ರಸ್ಟ್‌ರವರ ಮನವಿ ದಿ: 20–10–2009.

2) ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಎಲ್‌ಎನ್‌ಡಿ (ಎನ್‌ಎ) ಸಿಆರ್ 130/09–10, ದಿ: 30–10–2009.

**ಪ್ರಸ್ತಾವನೆ :**

ಅಧ್ಯಕ್ಷರು, ವೈ.ಎ.ಎನ್ ಚ್ಯಾರಿಟೆಬಲ್ ಟ್ರಸ್ಟ್ ಇವರು ಸರ್ಕಾರಕ್ಕೆ ಸಲ್ಲಿಸಿದ ಮನವಿಯಲ್ಲಿ ಸದರಿ ಸಂಸ್ಥೆಯು ಉನ್ನತ ಮಟ್ಟದ ಕನ್ನಡ ಮಾಧ್ಯಮದ ಪ್ರಾಥಮಿಕ ಮತ್ತು ಪ್ರೌಢಶಾಲೆಯನ್ನು ತೆರೆಯಲು ಉದ್ದೇಶಿಸಿದ್ದು ಹಾಗೂ ಐ.ಸಿ.ಎಸ್.ಸಿ. ಅಥವಾ ಸಿ.ಬಿ.ಎಸ್.ಸಿ. ಪಠ್ಯ ಕ್ರಮವನ್ನು ನಡೆಸಲು ಉದ್ದೇಶಿಸಿದ್ದು, ಸದರಿ ಉದ್ದೇಶಕ್ಕಾಗಿ ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಜಾಲ ಹೋಬಳಿ, ಹೊಸಹಳ್ಳಿ ಗ್ರಾಮದ ಸ.ನಂ.21ರಲ್ಲಿನ 10 ಎಕರೆ ಜಮೀನನ್ನು ಮಂಜೂರು ಮಾಡುವಂತೆ ಕೋರಿರುತ್ತಾರೆ.

2. ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರು ದಿ: 30–10–2009ರ ಪತ್ರದಲ್ಲಿ ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಜಾಲ ಹೋಬಳಿ, ಹೊಸಹಳ್ಳಿ ಗ್ರಾಮದ ಸ.ನಂ.21ರಲ್ಲಿನ 10 ಎಕರೆ ಜಮೀನನ್ನು ವೈ.ಎ.ಎನ್. ಚ್ಯಾರಿಟೆಬಲ್ ಟ್ರಸ್ಟ್ ಇವರಿಗೆ ಮಂಜೂರು ಮಾಡುವ ಬಗ್ಗೆ ಸರ್ಕಾರದ ಆದೇಶ ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

3) ಜಿಲ್ಲಾಧಿಕಾರಿಗಳ ವರದಿಯನ್ವಯ ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಜಾಲ ಹೋಬಳಿ, ಹೊಸಹಳ್ಳಿ ಗ್ರಾಮದ ಸ.ನಂ.21ರಲ್ಲಿನ 10 ಎಕರೆ ಜಮೀನನ್ನು ಹರಾಜು ಮಾಡಲಾಗಿದ್ದು. ನಂತರ ಹರಾಜನ್ನು ರದ್ದುಗೊಳಿಸಲಾಗಿದೆ. ಈ ಜಮೀನು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಸರಹದ್ದಿನಿಂದ 1.5 ಕಿ.ಮೀ. ದೂರದಲ್ಲಿರುತ್ತದೆ. ಯಲಹಂಕ ರೈಲ್ವೆ ನಿಲ್ದಾಣಕ್ಕೆ ಸುಮಾರು 8 ಕಿ.ಮೀ. ದೂರದಲ್ಲಿರುತ್ತದೆ. ಅಲ್ಲದೆ, ಈ ಜಮೀನಿನ ಮಾರ್ಗಸೂಚಿ ಬೆಲೆಯು ಎಕರೆಯೊಂದಕ್ಕೆ ರೂ. 25 ಲಕ್ಷಗಳಾಗಿದ್ದು. ಮಾರುಕಟ್ಟೆ ದರವು ರೂ. 1 ಕೋಟಿಗಳಿರುವುದಾಗಿ ಜಿಲ್ಲಾಧಿಕಾರಿಗಳು ವರದಿ ಮಾಡಿರುತ್ತಾರೆ.

4. ಮೇಲಿನ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 636 ಎಲ್‌ಜಿಬಿ 2011, ಬೆಂಗಳೂರು, ದಿನಾಂಕ 12-01-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 27ರಲ್ಲಿನ ಅಧಿಕಾರವನ್ನು ಚಲಾಯಿಸಿ ನಿಯಮ 10(2)ನ್ನು ಸಡಿಲಿಸಿ ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಜಾಲ ಹೋಬಳಿ, ಹೊಸಹಳ್ಳಿ, ಗ್ರಾಮದ ಸ.ನಂ. 21ರಲ್ಲಿನ4.24 ಎಕರೆ/ಗುಂ ಜಮೀನನ್ನು ವೈ.ಎ.ಎನ್. ಚ್ಯಾರಿಟೆಬಲ್ ಟ್ರಸ್ಟ್ ಬೆಂಗಳೂರು ಇವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಪ್ರಸಕ್ತ ಮಾರ್ಗಸೂಚಿ ಬೆಲೆಯ ಶೇ. 50ರಷ್ಟನ್ನು ವಿಧಿಸಿ ಮಂಜೂರು ಮಾಡಲು ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ಕೆ. ರಾಮಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 413 ಕಂದಾಯ ಇಲಾಖೆ (ಭೂ.ಮಂ–1)

## ಕಂದಾಯ ಸಚಿವಾಲಯ

**ವಿಷಯ :** ಆಸರೆ ಯೋಜನೆಯಡಿಯಲ್ಲಿ ಮನೆ ನಿರ್ಮಾಣಕ್ಕಾಗಿ ವಿದ್ಯುಚ್ಛಕ್ತಿ ಉಂಟಾದ ಗ್ರಾಮಗಳಲ್ಲಿ ಡೀಸಲ್ ಜನರೇಟರ್‌ನ್ನು ಬಾಡಿಗೆ ಆಧಾರದ ಮೇಲೆ ಪಡೆಯುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ: ಕಂಇ 174 ಟಿಎನ್‌ಆರ್ 2010, ದಿನಾಂಕ: 15-04-2010.
2) ಸರ್ಕಾರದ ಆದೇಶ ಸಂ. ಕಂಇ 174 ಟಿಎನ್‌ಆರ್ 2010 (ಭಾಗ), ದಿನಾಂಕ: 18-01-2011.
3) ಜಿಲ್ಲಾಧಿಕಾರಿಗಳ ಬೇಡಿಕೆ ಪತ್ರಗಳು.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಆಸರೆ ಮನೆಗಳ ನಿರ್ಮಾಣಕ್ಕೆ ನೀರು ಸರಬರಾಜಿಗೆ ವಿದ್ಯುಚ್ಛಕ್ತಿ ವ್ಯತ್ಯಯ ಉಂಟಾದ ಗ್ರಾಮಗಳಲ್ಲಿ ಡೀಸಲ್ ಜನರೇಟರ್‌ಗಳನ್ನು ಬಾಡಿಗೆ ಆಧಾರದ ಮೇಲೆ ಕೆಲವೊಂದು ಷರತ್ತಿಗಳಿಗೆ ಒಳಪಟ್ಟು, ಉಪಯೋಗಿಸಿಕೊಳ್ಳಲು ಮಂಜೂರಾತಿ ನೀಡಿದೆ.

ಮೇಲೆ ಓದಲಾದ (2)ರ ಸರ್ಕಾರಿ ಆದೇಶದಲ್ಲಿ ವಿದ್ಯುಚ್ಛಕ್ತಿ ವ್ಯತ್ಯಯ ಉಂಟಾದ ಗ್ರಾಮಗಳಲ್ಲಿ ನೀರು ಸರಬರಾಜಿಗೆ ಡೀಸಲ್ ಜನರೇಟರ್ ಬಾಡಿಗೆ ಆಧಾರದ ಮೇಲೆ ಪಡೆಯುವ ಅವಧಿಯನ್ನು ದಿನಾಂಕ: 31-03-2011 ರವರೆಗೆ ವಿಸ್ತರಿಸಲಾಗಿದೆ.

ಸದರಿ ಅವಧಿಯು ದಿನಾಂಕ: 31-03-2011ಕ್ಕೆ ಮುಕ್ತಾಯಗೊಂಡಿದ್ದು, ಆಸರೆ ಯೋಜನೆಯಡಿಯಲ್ಲಿ ಮನೆಗಳ ನಿರ್ಮಾಣ ಕಾರ್ಯ ಇನ್ನೂ ಪ್ರಗತಿಯಲ್ಲಿದ್ದು, ಈ ಅವಧಿಯನ್ನು ದಿನಾಂಕ: 31-12-2011ರ ವರೆಗೆ ವಿಸ್ತರಿಸುವಂತೆ ಮೇಲೆ ಓದಲಾದ (3)ರ ಪತ್ರದಲ್ಲಿ ಜಿಲ್ಲಾಧಿಕಾರಿಗಳು ಕೋರಿರುತ್ತಾರೆ. ಈ ಹಿನ್ನೆಲೆಯಲ್ಲಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 354 ಟಿಎನ್‌ಆರ್ 2011, ಬೆಂಗಳೂರು, ದಿನಾಂಕ 11-01-2012**

ಆಸರೆ ಯೋಜನೆಯಡಿಯಲ್ಲಿ ಮನೆಗಳನ್ನು ನಿರ್ಮಿಸಲು, ವಿದ್ಯುಚ್ಛಕ್ತಿ ವ್ಯತ್ಯಯ ಉಂಟಾದ ಜಿಲ್ಲೆಗಳಲ್ಲಿ ಮಾತ್ರ ಅನ್ವಯವಾಗುವಂತೆ, ಈಗಾಗಲೇ ಆರ್.ಡಿ. 174 ಟಿಎನ್‌ಆರ್ 2010, ದಿನಾಂಕ: 15-04-2010ರ ಆದೇಶದಲ್ಲಿ ವಿಧಿಸಿರುವ ಷರತ್ತುಗಳ ಮೇರೆಗೆ ಡೀಸಲ್ ಜನರೇಟರ್‌ನ್ನು ಬಾಡಿಗೆ ಆಧಾರದ ಮೇಲೆ ಉಪಯೋಗಿಸಿಕೊಳ್ಳಲು ಅವಧಿಯನ್ನು ದಿನಾಂಕ: 31-12-2011 ರವರೆಗೆ ವಿಸ್ತರಿಸಿ, ಸರ್ಕಾರ ಮಂಜೂರಾತಿ ನೀಡಿದೆ.

ಈ ಆದೇಶವನ್ನು ಮಾನ್ಯ ಮುಖ್ಯಮಂತ್ರಿಯವರ ಅನುಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್.ಎಂ. ಆನಂದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಪಿ.ಆರ್. 414 ಕಂದಾಯ ಇಲಾಖೆ (ವಿ.ನಿ.& ಸೇವೆಗಳು-2)

## ಕಂದಾಯ ಸಚಿವಾಲಯ

**ತಿದ್ದುಪಡಿ**

**ಸಂಖ್ಯೆ: ಆರ್‌ಡಿ 147 ಎಎಸ್‌ಡಿ 2007, ಬೆಂಗಳೂರು, ದಿನಾಂಕ 02-01-2012**

ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 147ಎಎಸ್‌ಡಿ 2007, ದಿನಾಂಕ: 27-06-2011. ರ ಆದೇಶ ಭಾಗದಲ್ಲಿ (ಪುಟ-2) ಶ್ರೀ ಮೊಹಮ್ಮದ್ ಇಸ್ಮಾಯಿಲ್, ಉಪ ಕಾರ್ಯದರ್ಶಿ (ಅಭಿಪ್ರಾಯ-1) ಕಾನೂನು ಮತ್ತು ಮಾನವ ಹಕ್ಕುಗಳ ಇಲಾಖೆ, ಎಂಬುದರ ಬದಲಾಗಿ ಸರ್ಕಾರದ ವಾದೇಕ್ಷಕರು ಮತ್ತು ಪದ ನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿಗಳು, ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ, ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎನ್.ಗೋಪಾಲಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಪಿ.ಆರ್. 415 ಕಂದಾಯ ಇಲಾಖೆ (ಸೇವೆಗಳು-3)

## ಇಂಧನ ಸಚಿವಾಲಯ

**ವಿಷಯ :** ಮೆ: ಆರ್‌ಎಸ್‌ಆರ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರಿಗೆ ಹಂಚಿಕೆಯಾಗಿರುವ 30.60 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಲ್ಲಿ 0.85 ಮೆ.ವ್ಯಾ. ಸಾಮರ್ಥ್ಯವನ್ನು ಮೆ: ಗೋಲ್ಡನ್ ಹ್ಯಾಚರೀಸ್ ರವರಿಗೆ ವರ್ಗಾವಣೆ ಮಾಡುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ: ಇನ್ 337 ಎನ್‌ಸಿಇ 2006 ದಿನಾಂಕ: 16-10-2006.
**2)** ಸರ್ಕಾರದ ಆದೇಶ ಸಂಖ್ಯೆ: ಇನ್ 09 ಎನ್‌ಸಿಇ 2007 ದಿನಾಂಕ: 12-01-2007.
**3)** ಸರ್ಕಾರದ ಆದೇಶ ಸಂಖ್ಯೆ: ಇನ್ 432 ಎನ್‌ಸಿಇ 2010 ದಿನಾಂಕ: 16-12-2010.
**4)** ಸರ್ಕಾರದ ಆದೇಶ ಸಂಖ್ಯೆ: ಇಎನ್ 318 ಎನ್‌ಸಿಇ 2011 ದಿನಾಂಕ: 26-07-2011.
**5)** ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: KRED/08/GH-0.85 MW (GNS -29) RSR 2011/4501 ದಿನಾಂಕ: 30-11-2011

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರಿ ಆದೇಶದಲ್ಲಿ ಮೆ: ಆರ್ ಶ್ರೀ ರಾಮುಲು ರೆಡ್ಡಿ ಮತ್ತು ಕೋ ಕಂಪನಿಗೆ ದಾವಣಗೆರೆ, ಬಳ್ಳಾರಿ ಮತ್ತು ಬೆಳಗಾವಿ ಜಿಲ್ಲೆಗಳಲ್ಲಿ 63 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಅನುಷ್ಠಾನ ಮಾಡಲು ಅನುಮತಿ ನೀಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಸರ್ಕಾರಿ ಆದೇಶದಲ್ಲಿ ಮೆ: ಆರ್ ಶ್ರೀ ರಾಮುಲು ರೆಡ್ಡಿ ಮತ್ತು ಕೋ ಹೆಸರನ್ನು ಮೆ: ಆರ್‌ಎಸ್‌ಆರ್ ಪವರ್ ಪ್ರೈವೇಟ್ ಲಿಮಿಟೆಡ್ ಎಂದು ಬದಲಾಯಿಸಲು ಅನುಮತಿ ನೀಡಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಆದೇಶದಲ್ಲಿ ಅನುಮತಿಸಿರುವ ಒಟ್ಟು ಸಾಮರ್ಥ್ಯದಲ್ಲಿ ಬೆಳಗಾವಿ ಜಿಲ್ಲೆಯಲ್ಲಿ ಅನುಮತಿಸಿರುವ ಅಂಶಿಕ ಸಾಮರ್ಥ್ಯವಾಗಿರುವ 7 ಮೆ.ವ್ಯಾ ಸಾಮರ್ಥ್ಯವನ್ನು 30.60 ಮೆ.ವ್ಯಾ.ಗೆ. 25 ಮೆ.ವ್ಯಾ. ವಿದ್ಯುತ್ತನ್ನು ರಾಜ್ಯದ ಗ್ರಿಡ್‌ಗೆ ಸರಬರಾಜು ಮಾಡತಕ್ಕದ್ದು ಹಾಗೂ ಈ ಯೋಜನೆಯನ್ನು ದಿ: 31–3–2011ರೊಳಗೆ ಅನುಷ್ಠಾನಗೊಳಿಸತಕ್ಕದ್ದೆಂಬ ಷರತ್ತಿಗೊಳಪಟ್ಟು ಹೆಚ್ಚಿಸಲು ಮೇಲೆ (3)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಅನುಮೋದನೆ ನೀಡಲಾಗಿತ್ತು. ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಆದೇಶದಲ್ಲಿ ಈ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು ದಿನಾಂಕ 31–12–2011 ರವರೆಗೆ ವಿಸ್ತರಿಸಲಾಗಿತ್ತು.

ಮೇಲೆ ಓದಲಾದ (5)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ: ಆರ್‌ಎಸ್‌ಆರ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರಿಗೆ ಬೆಳಗಾವಿ ಜಿಲ್ಲೆಯ ಚಿಕ್ಕೋಡಿ ತಾಲ್ಲೂಕಿನಲ್ಲಿ ಅನುಷ್ಠಾನ ಮಾಡಲು ಅನುಮತಿಸಿರುವ 30.60 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ 0.85 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ: ಗೋಲ್ಡನ್ ಹ್ಯಾಚರೀಸ್ ಕಂಪನಿಗೆ ವರ್ಗಾಯಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ. ಸದರಿ ಯೋಜನೆಯು ಖಾಸಗಿ ಜಮೀನಿನಲ್ಲಿ ಬರುತ್ತದೆ ಮತ್ತು ಈ ಯೋಜನೆಯನ್ನು ದಿನಾಂಕ: 31–12–2011ಕ್ಕೆ ಅನುಷ್ಠಾನಗೊಳಿಸಲಾಗುವುದೆಂದು ಸಹ ತಿಳಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಅದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 445 ಎನ್‌ಸಿಇ 2011, ಬೆಂಗಳೂರು, ದಿನಾಂಕ 16–01–2012**

ಮೆ: ಆರ್‌ಎಸ್‌ಆರ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರಿಗೆ ಬೆಳಗಾವಿ ಜಿಲ್ಲೆಯಲ್ಲಿ ಅನುಷ್ಠಾನ ಮಾಡಲು ಅನುಮತಿಸಿರುವ 30.60 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ 0.85 ಮೆ.ವ್ಯಾ ಸಾಮರ್ಥ್ಯದ ಯೋಜನೆಯನ್ನು ಮೆ: ಗೋಲ್ಡನ್ ಹ್ಯಾಚರೀಸ್ ಕಂಪನಿಯವರಿಗೆ ಈ ಕೆಳಗಿನ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಹಾಗೂ ಕೆಳಕಂಡ ಷರತ್ತಿಗೊಳಪಟ್ಟು ವರ್ಗಾಯಿಸಲಾಗಿದೆ :–

**Schedule**

| Location and District | Description |
|---|---|
| Shirgaon village, Chikkodi Taluk Belgaum District | The identified potential comprises of two areas and mixture of hill and plains. Area A is spread N-E direction of Shirgaon. Whereas Area B is located in South of Girgaon and is spread in E-W directions. The Geographical co-ordinates of Area A & Area-B are as follows:-<br>Area –A:<br>Latitude : $16^0$27’32”- $16^0$30’0” N<br>Longitude : $74^0$31’06” – $74^0$32’57” E<br>Ridge peaks: 620 & 647m AMSL<br>Area – B<br>Latitude : $16^0$25’52”- $16^0$26’41” N<br>Longitude : $74^0$30’52” – $74^0$32’41” E<br>Ridge peaks: 720m AMSL<br>Toposheet: 47 L/11 |

Land details of the Project

| Village Name | Taluk & District | MW | Land Sy. No | No. of WTGs | Extent in land (Acres) | WTG Location No. |
|---|---|---|---|---|---|---|
| Shirgaon | Chikkodi/ Belgaum | 0.85 | 135/1 | 1 No. | 2 Acres | GNS 29 |

1. ಮೆ: ಗೋಲ್ಡನ್ ಹ್ಯಾಚರೀಸ್ ರವರು ದಿನಾಂಕ 31–1–2012 ರೊಳಗಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.
2. ಸದರಿ ಯೋಜನೆಯನ್ನು ದಿನಾಂಕ 29–2–2012 ರೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು. ಈ ಕುರಿತಂತೆ ಕ್ರೆಡಲ್ ಅಭಿವೃದ್ಧಿದಾರರಿಂದ ಒಪ್ಪಿಗೆ ಪತ್ರ ಪಡೆಯತಕ್ಕದ್ದು (committment letter).
3. ಮೆ: ಗೋಲ್ಡನ್ ಹ್ಯಾಚರೀಸ್ ರವರು ವಿದ್ಯುತ್ ಖರೀದಿ ಒಪ್ಪಂದವನ್ನು ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ ನಿಯಮಿತ ಇವರೊಂದಿಗೆ ಮಾಡಿಕೊಳ್ಳತಕ್ಕದ್ದು.
4. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಹಂಚಿಕೆ ಆದೇಶದ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸುರೇಶ್. ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ

ಪಿ.ಆರ್. 416

## ಇಂಧನ ಸಚಿವಾಲಯ

**ವಿಷಯ :** ಮೆ: ರಾಯಚೂರು ಬಯೋ–ಎನರ್ಜಿಸ್ ಪ್ರೈವೇಟ್ ಲಿಮಿಟೆಡ್ ಇವರ ಜೈವಿಕ ಇಂಧನ ಆಧಾರಿತ ವಿದ್ಯುತ್ ಘಟಕದ ಸಾಮರ್ಥ್ಯವನ್ನು 4.5 ಮೆಗಾ ವ್ಯಾಟ್ ನಿಂದ 9.00 ಮೆ.ವ್ಯಾ.ಗೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರಿ ಪತ್ರ ಸಂಖ್ಯೆ: ಡಿಇ 2 ಎನ್‌ಸಿಇ 2001 ದಿನಾಂಕ: 18–08–2001.

2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/03ಎಫ್–52/ಆರ್‌ಬಿಇಪಿಎಲ್/2011–12/4211 ದಿನಾಂಕ: 28–10–2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಪತ್ರದಲ್ಲಿ ಮೆ: ರಾಯಚೂರು ಬಯೋ–ಎನರ್ಜಿಸ್ ಪ್ರೈವೇಟ್ ಲಿಮಿಟೆಡ್ ರವರಿಗೆ ರಾಯಚೂರು ಗ್ರೋತ್ ಸೆಂಟರ್, ರಾಯಚೂರು ತಾಲ್ಲೂಕು, ರಾಯಚೂರು ಜಿಲ್ಲೆಯಲ್ಲಿ 4.5 ಮೆಗಾ ವ್ಯಾಟ್ ಸಾಮರ್ಥ್ಯದ ಜೈವಿಕ ಇಂಧನ ಆಧಾರಿತ ವಿದ್ಯುತ್ ಘಟಕವನ್ನು ಸ್ಥಾಪಿಸಲು ನಿರಾಕ್ಷೇಪಣೆಯನ್ನು ನೀಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ: ರಾಯಚೂರು ಬಯೋ–ಎನರ್ಜಿಸ್ ಪ್ರೈವೇಟ್ ಲಿಮಿಟೆಡ್ ರವರಿಗೆ ನಿರಾಕ್ಷೇಪಣೆಯನ್ನು ನೀಡಿರುವ ಮೇಲಿನ ಜೈವಿಕ ಇಂಧನ ಆಧಾರಿತ ವಿದ್ಯುತ್ ಘಟಕದ ಸಾಮರ್ಥ್ಯವನ್ನು 4.5 ಮೆಗಾ ವ್ಯಾಟ್ ನಿಂದ 9.00 ಮೆ.ವ್ಯಾ. ಸಾಮರ್ಥ್ಯಕ್ಕೆ ಹೆಚ್ಚಿಸಲು ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಎನ್ 427 ಎನ್‌ಸಿಇ 2011, ಬೆಂಗಳೂರು, ದಿನಾಂಕ 16–01–2012**

ಮೆ: ರಾಯಚೂರು ಬಯೋ–ಎನರ್ಜಿಸ್ ಪ್ರೈವೇಟ್ ಲಿಮಿಟೆಡ್ ರವರಿಗೆ ರಾಯಚೂರು ಗ್ರೋತ್ ಸೆಂಟರ್, ರಾಯಚೂರು ತಾಲ್ಲೂಕು, ರಾಯಚೂರು ಜಿಲ್ಲೆಯಲ್ಲಿ 4.5 ಮೆಗಾ ವ್ಯಾಟ್ ಸಾಮರ್ಥ್ಯದ ಜೈವಿಕ ಇಂಧನ ಆಧಾರಿತ ವಿದ್ಯುತ್ ಘಟಕವನ್ನು ಸ್ಥಾಪಿಸಲು ನೀಡಿರುವ ನಿರಾಕ್ಷೇಪಣೆಯನ್ನು 9.00 ಮೆ.ವ್ಯಾ. ಸಾಮರ್ಥ್ಯಕ್ಕೆ ಹೆಚ್ಚಿಸಲಾಗಿದೆ.

ಈ ಯೋಜನೆಯನ್ನು ದಿನಾಂಕ 31–12–2013ರೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು.

ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಓದಲಾದ (1)ರ ಪತ್ರದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಸುರೇಶ್. ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ,

ಪಿ.ಆರ್. 417

## INFRASTRUCTURE DEVELOPMENT SECRETARIAT

**Sub :** Diversion of Forest Land for construction of Bangalore International Airport at Devanahalli-release of funds for environmental losses-reg.

**Read :** 1) G.O. No. FEE 94 FGL 95, dated 17-12-2002

2) Letter No. A.5 (5)GFL. CR. 32/1993-94, dated 07/11-05-2009 of Principal Chief Conservator of Forest, Bangalore.

3) Proceedings of the Meeting held on 11-06-2010 under the Chairmanship of Principal Secretary to Government, Forest, Ecology and Environment Department (FEE 157 FLL 2009 (P).

4) Letter No. DGM (IPD-1)1143/2011-12, dated 18-08-2011 of the Deputy General Manager, KSIIDC, Bangalore.

5) G.O. No. FD, 137 BRS 2011, Dated 30-12-2011

**Preamble:**

In the G.O. read at Sl. No. (1) above, Government has accorded sanction for diversion of 565 Hectares (1394.20 acres) of forest land for construction of New International Airport at Devanahalli Taluk, Bangalore Rural District under section 2 of Forest (Conservation) Act, 1980 in favour of Karnataka State Industrial Investment and Development Corporation Ltd., (KSIIDC) subject to certain conditions.

In the letter read at Sl. No. (2) above, The Principal Chief Conservator of Forests has stated that the Accountant General (Karnataka) while auditing the accounts of the Deputy Conservator of Forests, Bangalore Rural Division as well as the office of Principal Chief Conservator of Forest have directed to collect the environmental loss due to diversion of 565 Hectares of forest land for construction of New International Airport at Devanahalli Taluk, Bangalore from Karnataka State Industrial Investment and Development Corporation Ltd., as per the condition No. 10 of G.O. dated 17-12-2002. This has also figured in the report of the Public Accounts Committee and in the hearing of the Committee, it has been directed to collect the environmental loss from Karnataka State Industrial Investment and Development Corporation Ltd., immediately as such, the environmental loss of Rs. 42,04,62,265 be payable as requested by the Deputy Conservator of Forests, Bangalore Rural Division, Bangalore.

In the meeting read at Sl. No. (3) above, it was decided that the environmental losses of Rs. 42.05 crores is to be borne by KSIIDC, as there is an objection by the Public Accounts Committee.

In the letter read at (4) above, the proposal of Karnataka State Industrial Investment and Development Corporation Ltd., Bangalore for release of funds for payment of compensation for the environmental loss has been examined in detail.

In the G.O. read at Sl. No. (5) above, sanction was accorded for the re-appropriation of a sum of Rs. 259.76 lakhs under the Major Head of Account 5465-Captal outlay on general financial and trading institutions during 2011-12 from the head 5465-01-190-2-05(p) 211-Investments.

**Government Order No. IDD 76 DIA 2009, Bangalore, dated 11-01-2012**

After careful examination of the proposal sanction is accorded for release of Rs. 4205.00 lakhs (Rupees Four thousand two hundred five lakhs only) to Karnataka State Industrial Investment and Development Corporation Ltd., Bangalore towards the payment of compensation for environmental loss on account of diversion of 565 Hectares (1394.20 Acres) of forest land for the construction of Bangalore International Airport at Devanahalli.

The expenditure of Rs. 4205.00 lakhs shall be met under the Head of Account 5465-01-190-1-05 Development of Minor Airports (Plan)-211 investment along with re-appropriated amount from 5465-01-190-2-05(Plan) alternative roads-211 investment.

The Managing Director, KSIIDC, Bangalore is authorized to draw the above amount of Rs. 4205.00 lakhs on a payees receipt duly counter signed by The Under secretary to Government. Infrastructure Development Department Bangalore for onward transfer of the same to Forest Department.

Karnataka State Industrial Investment and Development Corporation Ltd., shall keep the Infrastructure Development Department informed once the payment is made to the Forest Department.

This order is issued with the concurrence of Finance Department vide endorsement No. FD 1800 Exp-1/11, dated 30-12-2011.

By Order and in the name of the Governor of Karnataka
**S. J. Sampath Kumar**
Under Secretary to Government
Infrastructure Development Department

P.R. 418

## INFRASTRUCTURE DEVELOPMENT SECRETARIAT

**Sub:** Development of Tadadi Sea Port-Release of Funds

**Read:** 1) G.O. No. IDD 30 DIA 2011, dated 25-03-2011

2) Letter No. DGM(IPD)TP/380/2011-12, Dated 23-05-2011 of Deputy General Manager (IPD), Karnataka State Industrial and Infrastructure Development Corporation Limited, Bangalore.

**Preamble:**

In G.O. read at Sl. No. (1) above, Government has accorded sanction for release of Rs. 100.00 lakhs towards the Tadadi Port related expenditure by Karnataka State Industrial and Infrastructure Development Corporation Limited (KSIIDC)

In the letter read at Sl. No. (2) above. The Deputy General manager, Karnataka State Industrial and Infrastructure Development Corporation Limited, Bangalore has submitted the details pertaining to the expenditure towards the consultancy service for the Development of Tadadi Sea Port Project and has requested to release the balance funds to Karnataka State Industrial and Infrastructure Development Corporation Limited.

| Sl. No. | Particulars | Total Amount payable | Amount paid up to 31-03-2011 | Balance payable |
|---|---|---|---|---|
| 1 | Technical consultants | 292.63 | 51.20 | 241.43 |
| 2 | Consultants for Environment Impact Study | 82.73 | 41.36 | 41.36 |
| 3 | Secretarial Consultant (for formation of SPV) | 0.50 | 0.00 | 0.50 |
| 4 | Port Expert | 1.50* | 0.83 | 0.67 |

*Estimated (as Port Expert has been taken as per visit & per review basis)

The proposal has been examined and hence this order

**Government Order No. IDD 30 DIA 2011, Bangalore, dated 19-01-2012**

After careful examination of the proposal, sanction is hereby accorded for release of Rs. 377.00 lakhs (Rupees Three hundred seventy seven lakhs) only to Karnataka State Industrial and Infrastructure Development Corporation Limited, Bangalore towards the expenditure for consultancy services.

The expenditure of Rs. 377.00 lakhs shall be met under the head of account 5465-01-190-1-18 (P) Tadadi Sea Port Project 211 investments re-appropriated out of the funds available under the head of account 5465-01-190-2-05 alternative roads-investment, 211 investments.

The Managing Director, Karnataka State Industrial and Infrastructure Development Corporation Limited, Bangalore is authorized to draw the above amount of Rs. 377.00 lakhs on a payees receipt duly counter signed by the Under Secretary to Government, Infrastructure Development Department, Bangalore.

This order is issued with the concurrence of Finance Department vide G.O. No. FD 154 BRS 2011, dated 06-01-2012 and endorsement No. FD 1907 Exp-1/2011, dated 09-01-2012.

By Order and in the name of the Governor of Karnataka
**S. J. Sampath Kumar**
Under Secretary to Government
Infrastructure Development Department

P.R. 419

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ:** ಬೀದರ್ ಜಿಲ್ಲೆಯಲ್ಲಿ ಉಪ ಪ್ರಾದೇಶಿಕ ವಿಜ್ಞಾನ ಕೇಂದ್ರ ಸ್ಥಾಪನೆಗೆ ಅನುಮೋದನೆ:-

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ವಿಯಇ 134 ವಿತ್ರಮ 2007, ಬೆಂಗಳೂರು, ದಿನಾಂಕ 20-11-2008.
2) ಸರ್ಕಾರಿ ಆದೇಶ ಸಂಖ್ಯೆ: ವಿಯಇ 134 ವಿತ್ರಮ 2007, ದಿನಾಂಕ 10-12-2010
3) ಮಾನ್ಯ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವರ ಅಧ್ಯಕ್ಷತೆಯಲ್ಲಿ ದಿನಾಂಕ 27-05-2011 ರಂದು ನಡೆದ ಉಪ ಪ್ರಾದೇಶಿಕ ವಿಜ್ಞಾನ ಕೇಂದ್ರಗಳ ಪರಿಶೀಲನಾ ಸಭೆಯ ನಡವಳಿ
4) ಜಿಲ್ಲಾಧಿಕಾರಿಗಳು ಬೀದರ್ ಜಿಲ್ಲೆ, ಇವರ ಅ.ಸ.ಪ.ಸಂ.ಕಂ/ಆಶಾ/ಸಿ.ಆರ್.-01/2011-12, ದಿನಾಂಕ 29-09-2011.

**ಪ್ರಸ್ತಾವನೆ :**

ಬೀದರ್ ಜಿಲ್ಲೆಯು ಕರ್ನಾಟಕ ರಾಜ್ಯದ ಈಶಾನ್ಯದಲ್ಲಿರುವ ಕೊನೆಯ ಜಿಲ್ಲೆಯಾಗಿದ್ದು, ಹೈದರಾಬಾದ್ ಕರ್ನಾಟಕ ವ್ಯಾಪ್ತಿಯಲ್ಲಿ ಬರುವುದು ಹಾಗೂ ಜಿಲ್ಲೆಯು 600 ಗ್ರಾಮಗಳನ್ನು ಹಾಗೂ 300 halmlets ಹಾಗೂ 5 ತಾಲ್ಲೂಕುಗಳಾದ ಬೀದರ್, ಹುಮನಾಬಾದ್ ಚಿಟಗುಪ್ಪ, ಬಸವ ಕಲ್ಯಾಣ ಬಾಲ್ಕಿ ಹಾಗೂ ಔರಾದ್ ತಾಲ್ಲೂಕುಗಳನ್ನು ಹೊಂದಿರುತ್ತದೆ ಹಾಗೂ ಹಿಂದುಳಿದ ಜಿಲ್ಲೆಯಾಗಿದ್ದು, ಮಹಾರಾಷ್ಟ್ರ ಮತ್ತು ಆಂಧ್ರ ರಾಜ್ಯದ ಗಡಿ ಅಂಚಿನಲ್ಲಿರುವ ಜಿಲ್ಲೆಯಾಗಿದೆ. ಜಿಲ್ಲೆಯಲ್ಲಿ ಹಲವಾರು ಶೈಕ್ಷಣಿಕ ಸಂಸ್ಥೆಗಳು ಸ್ಥಾಪನೆಗೊಂಡಿವೆ ಕೆಲವು ಸಂಸ್ಥೆಗಳು ಸ್ಥಾಪನೆಯ ಹಂತದಲ್ಲಿವೆ. ಇತ್ತೀಚೆಗೆ ಪಶುವೈದ್ಯ ವಿಶ್ವವಿದ್ಯಾನಿಲಯವನ್ನು ಸ್ಥಾಪಿಸುತ್ತಿದ್ದು ಹಾಗೂ ಸರ್ಕಾರಿ ವೈದ್ಯಕೀಯ ಶಿಕ್ಷಣ ಸಂಸ್ಥೆ ಮತ್ತು ತೋಟಗಾರಿಕೆ ಕಾಲೇಜನ್ನು ಹೊಂದಿದ್ದು, ಈ ಸಂಸ್ಥೆಗಳಲ್ಲಿ ಪದವಿ ಶಿಕ್ಷಣ ಹಾಗೂ ಸ್ನಾತಕೋತ್ತರ ಪದವಿಗಳನ್ನು ಪಡೆಯಲು ವಿದ್ಯಾರ್ಥಿಗಳು ಅಧ್ಯಯನವನ್ನು ಮುಂದುವರಿಸುತ್ತಾ ಬರುತ್ತಿದ್ದಾರೆ. ಅಲ್ಲದೆ ಬೀದರ್ ಕೇಂದ್ರ ಸ್ಥಾನದಲ್ಲಿ ಉನ್ನತ ಮಟ್ಟದ ವಾಯು ಸೇನೆಯ ತರಬೇತಿ ಸಂಸ್ಥೆಯು ಸಹ ಕಾರ್ಯನಿರ್ವಹಿಸುತ್ತಿದೆ. ಈ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ ಬೀದರ್ ಜಿಲ್ಲೆಯಲ್ಲಿ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಕ್ಷೇತ್ರದಲ್ಲಿ ಶೈಕ್ಷಣಿಕವಾಗಿ ಜಿಲ್ಲೆಯಲ್ಲಿ ಅಧ್ಯಯನ ಮಾಡುತ್ತಿರುವ ವಿದ್ಯಾರ್ಥಿ ಸಮುದಾಯಕ್ಕೆ ಅಂದರೆ ಅದರಲ್ಲೂ ವಿಶೇಷವಾಗಿ ಗ್ರಾಮೀಣ ವಿದ್ಯಾರ್ಥಿಗಳಿಗೆ ಪ್ರಾಥಮಿಕ ಶಿಕ್ಷಣದಿಂದ ಹಿಡಿದು ಸ್ನಾತಕೋತ್ತರ ಪದವಿವರೆಗೂ ಓದುತ್ತಿರುವ ವಿದ್ಯಾರ್ಥಿಗಳಿಗೆ ಜ್ಞಾನಾರ್ಜನೆ ಬೆಳೆಯಲು ಹಾಗೂ ಸಾರ್ವಜನಿಕರಿಗೂ ಇತ್ತೀಚಿನ ವಿಜ್ಞಾನದ ಬಗ್ಗೆ ಹೆಚ್ಚಿನ ಮಾಹಿತಿಯನ್ನು ಪಡೆದುಕೊಳ್ಳುವ ದೃಷ್ಟಿಯಿಂದ ಬೀದರ್ ಜಿಲ್ಲೆಯ ಕೇಂದ್ರ ಸ್ಥಾನದ ಬೀದರ್ ನಗರಕ್ಕೆ ಹೊಂದಿಕೊಂಡಂತೆ ಒಂದು ಉಪ ಪ್ರಾದೇಶಿಕ ವಿಜ್ಞಾನ ಕೇಂದ್ರ ಸ್ಥಾಪಿಸುವುದು ಅವಶ್ಯವೆಂದು ಕಂಡು ಬಂದಿರುವುದರಿಂದ ಬೀದರ್ ಜಿಲ್ಲೆಯ ಉಪ ಪ್ರಾದೇಶಿಕ ಕೇಂದ್ರದ ಅಧ್ಯಕ್ಷರು ಮತ್ತು ಬೀದರ್ ಜಿಲ್ಲೆಯ ಜಿಲ್ಲಾಧಿಕಾರಿಗಳು, ಸ್ಥಳೀಯ ಸಾರ್ವಜನಿಕರು, ಲೋಕ ಸಭಾ ಸದಸ್ಯರು, ವಿಧಾನ ಸಭಾ ಸದಸ್ಯರು, ವಿಧಾನ ಪರಿಷತ್ ಸದಸ್ಯರು ಮತ್ತು ಸ್ಥಳೀಯ ಸಂಘ ಸಂಸ್ಥೆಗಳು ಉಪ ಪ್ರಾದೇಶಿಕ ವಿಜ್ಞಾನ ಕೇಂದ್ರವನ್ನು ಸ್ಥಾಪಿಸಲು ಒತ್ತಾಯಿಸುತ್ತಿದ್ದಾರೆ. ಆದ್ದರಿಂದ ಸದರಿ ಪ್ರಸ್ತಾವನೆ/ಬೇಡಿಕೆಗಳನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಮೇಲೆ ಓದಲಾದ (1) ಮತ್ತು (2)ರಲ್ಲಿ ರಾಜ್ಯ ಸರ್ಕಾರದ ಪಾಲಿನ ಅನುದಾನ ಕ್ರಮವಾಗಿ ರೂ. 100.00 ಲಕ್ಷಗಳು+30.00 ಲಕ್ಷಗಳನ್ನು ಅಂದರೆ ಒಟ್ಟು ರೂ. 130.00 ಲಕ್ಷಗಳನ್ನು ಕೆಲವು ಷರತ್ತಿಗೆ ಒಳಪಟ್ಟು ಈಗಾಗಲೇ ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ ಕ್ರಮ ಸಂ. (3)ರಲ್ಲಿ ಮಾನ್ಯ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವರ ಅಧ್ಯಕ್ಷತೆಯಲ್ಲಿ ದಿನಾಂಕ 27-05-2011ರಂದು ಉಪ ಪ್ರಾದೇಶಿಕ ವಿಜ್ಞಾನ ಕೇಂದ್ರಗಳ ಪ್ರಗತಿಯ ಪರಿಶೀಲನಾ ಸಭೆಯಲ್ಲಿ ವಿಜ್ಞಾನ ಕೇಂದ್ರಗಳನ್ನು ಸ್ಥಾಪಿಸುವ ಬಗ್ಗೆ ವಿಸ್ತೃತವಾಗಿ ಚರ್ಚಿಸಿ ಕೆಲವೊಂದು ನಿರ್ಣಯಗಳನ್ನು ತೆಗೆದುಕೊಳ್ಳಲಾಗಿದೆ. ರಾಜ್ಯ ಸರ್ಕಾರವು ಈಗಾಗಲೇ ಅನುಮೋದನೆ ನೀಡಿ ತನ್ನ ಪಾಲಿನ ಅನುದಾನ ರೂ. 130.00 ಲಕ್ಷಗಳನ್ನು ಬಿಡುಗಡೆ ಮಾಡಿದ್ದು, ಕೇಂದ್ರ ಸರ್ಕಾರದ ಅನುಮೋದನೆ ಹಾಗೂ ಅನುದಾನ ಸದ್ಯದಲ್ಲಿ ದೊರೆಯದೆ ಇರುವುದರಿಂದ, ಉಪ ಪ್ರಾದೇಶಿಕ ವಿಜ್ಞಾನ ಕೇಂದ್ರಗಳು ಕೇಂದ್ರ ಸರ್ಕಾರದ ಪಾಲಿನ ಅನುದಾನವನ್ನು ಸ್ಥಳೀಯ ಸಂಪನ್ಮೂಲಗಳಿಂದ ಕ್ರೋಢೀಕರಿಸಿ ವಿಜ್ಞಾನ ಕೇಂದ್ರ ಸ್ಥಾಪಿಸಲು ಮುಂದೆ ಬಂದರೆ ಅಂತಹ ಕೇಂದ್ರಗಳಿಗೆ ಅನುಮತಿ ನೀಡಲು ನಿರ್ಧರಿಸಲಾಯಿತು.

ಮೇಲೆ ಓದಲಾದ ಕ್ರಮ ಸಂ. (4)ರಲ್ಲಿನ ಅರೆ ಸರ್ಕಾರಿ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ಬೀದರ್ ಜಿಲ್ಲೆ, ಇವರು ದಿನಾಂಕ 27-05-2011ರಂದು ನಡೆದ ಸಭೆಯ ತೀರ್ಮಾನದನ್ವಯ ಬೀದರ್ ಉತ್ತರ ಹೋಬಳಿಯ ಕಬೀರವಾಡಾ ಗ್ರಾಮದ ಸರ್ವೆ ಸಂಖ್ಯೆ-3ರಲ್ಲಿ 5 ಎಕರೆ ಸರ್ಕಾರಿ ಭೂಮಿಯನ್ನು ಕಾಯ್ದಿರಿಸಿರುವುದಾಗಿ ತಿಳಿಸಿ, ವಿಜ್ಞಾನ ಕೇಂದ್ರದ ನಿರ್ಮಾಣಕ್ಕಾಗಿ ಸಂಸದರು ಮತ್ತು ಶಾಸಕರ ನಿಧಿಯಿಂದ ಕ್ರೋಢೀಕರಿಸಲು ಕ್ರಮಕೈಗೊಳ್ಳುತ್ತಿದ್ದು, ಎನ್.ಸಿ.ಎಸ್.ಎಂ. ಕೊಲ್ಕತ್ತ, ಇವರ ಮಾರ್ಗಸೂಚಿಗಳನ್ವಯ ಉಪ ಪ್ರಾದೇಶಿಕ ವಿಜ್ಞಾನ ಕೇಂದ್ರಗಳನ್ನು ಸ್ಥಾಪಿಸಲು ಅನುಮತಿ ನೀಡುವಂತೆ ಪ್ರಸ್ತಾವನೆಯನ್ನು ಸಲ್ಲಿಸಿ ಕೋರಿರುತ್ತಾರೆ.

ನಿರ್ದೇಶಕರು (ತಾಂತ್ರಿಕ) ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ ಇವರು ಬೀದರ್ ಜಿಲ್ಲೆಯಲ್ಲಿ ಉಪ ಪ್ರಾದೇಶಿಕ ವಿಜ್ಞಾನ ಕೇಂದ್ರವನ್ನು ಸ್ಥಾಪಿಸುವ ಕುರಿತು ಜಿಲ್ಲಾಧಿಕಾರಿಗಳು ನೀಡಿರುವ ಅಂಶವಾರು ವಿವರಗಳು ಮತ್ತು ದಾಖಲೆಗಳನ್ನು ಪರಿಶೀಲಿಸಿ ನೀಡಿರುವ ಅಭಿಪ್ರಾಯದನ್ವಯ ಬೀದರ್ ಜಿಲ್ಲೆಯಲ್ಲಿ ಉಪ ಪ್ರಾದೇಶಿಕ ವಿಜ್ಞಾನ ಕೇಂದ್ರವನ್ನು ಸ್ಥಾಪಿಸಲು ಅನುಮತಿ ನೀಡಬೇಕೆಂದು ಶಿಫಾರಸ್ಸು ಮಾಡಿರುತ್ತಾರೆ.

ಮೇಲ್ಕಂಡ ಖಂಡಿಕೆಗಳಲ್ಲಿ ವಿವರಿಸಿರುವ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು ಬೀದರ್‌ನಲ್ಲಿ ಉಪ ಪ್ರಾದೇಶಿಕ ವಿಜ್ಞಾನ ಕೇಂದ್ರವನ್ನು ಸ್ಥಾಪನೆ ಮಾಡಲು ಅನುಮೋದನೆ ನೀಡಲು ನಿರ್ಧರಿಸಿ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ವಿಯಇ 134 ವಿತ್ರಮ 2007, ಬೆಂಗಳೂರು, ದಿನಾಂಕ 17-01-2012**

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ NCSM ಕೊಲ್ಕತ್ತ ಇವರ ಪರಿಷ್ಕೃತ ಮಾರ್ಗಸೂಚಿಯಂತೆ ಬೀದರ್‌ನಲ್ಲಿ ಉಪ ಪ್ರಾದೇಶಿಕ ವಿಜ್ಞಾನ ಕೇಂದ್ರವನ್ನು ಸ್ಥಾಪಿಸಲು ಈ ಕೆಳಕಂಡ ಷರತ್ತಿಗೆ ಒಳಪಟ್ಟು ಅನುಮೋದನೆ ನೀಡಿ ಆದೇಶಿಸಲಾಗಿದೆ.

1) ಉಪ ಪ್ರಾದೇಶಿಕ ವಿಜ್ಞಾನ ಕೇಂದ್ರವನ್ನು ಎನ್.ಸಿ.ಎಸ್.ಎಂ. ಕೊಲ್ಕತ್ತ ಇವರ ಮಾರ್ಗಸೂಚಿಯಂತೆ (Plan and Estimate) ಉಪ ಪ್ರಾದೇಶಿಕ ಕೇಂದ್ರವನ್ನು ರಾಜ್ಯ ಸರ್ಕಾರದ ಅನುಮೋದನೆಯೊಂದಿಗೆ ನಿರ್ಮಿಸತಕ್ಕದ್ದು.
2) ಉಪ ಪ್ರಾದೇಶಿಕ ವಿಜ್ಞಾನ ಕೇಂದ್ರ ಸ್ಥಾಪಿಸಲು ಕಾಮಗಾರಿ ಪೂರ್ಣಗೊಳಿಸಿದ ಮೇಲೆ ಉಪಯೋಗತಾ ಪ್ರಮಾಣ ಪತ್ರವನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

3) ಸರ್ಕಾರವು ಬಿಡುಗಡೆ ಮಾಡಿರುವ ಅನುದಾನ ರೂ. 1.30 ಕೋಟಿಗಳನ್ನು ಉಪ ಪ್ರಾದೇಶಿಕ ವಿಜ್ಞಾನ ಕೇಂದ್ರದ ಸ್ಥಾಪನೆಗೆ ಮಾತ್ರ ಉಪಯೋಗಿಸಿಕೊಳ್ಳತಕ್ಕದ್ದು, ಯಾವುದೇ ಕಾರಣಕ್ಕೂ ಸದರಿ ಅನುದಾನವನ್ನು ಇತರೆ ಚಟುವಟಿಕೆಗಳಿಗೆ ಉಪಯೋಗಿಸತಕ್ಕದ್ದಲ್ಲ.

4) ವಿಜ್ಞಾನ ಕೇಂದ್ರದ ಆಡಳಿತ ಮಂಡಳಿಯನ್ನು ರಾಜ್ಯ ಸರ್ಕಾರವು ಒಪ್ಪಿಗೆ ನೀಡುವ Memorandum of Association ಮತ್ತು Rules & Regulations ಅನ್ವಯ ರಚಿಸತಕ್ಕದ್ದು. ವಿಜ್ಞಾನ ಕೇಂದ್ರದ ಅಧಿಕಾರಿ/ನೌಕರರ ಸಿಬ್ಬಂದಿಯನ್ನು ಎನ್.ಸಿ.ಎಸ್.ಎಂ. ಕೊಲ್ಕತ್ತಾ ಇವರ ಪರಿಷ್ಕೃತ ಮಾರ್ಗಸೂಚಿಯಂತೆ ರಾಜ್ಯ ಸರ್ಕಾರದ ಅನುಮೋದನೆಯೊಂದಿಗೆ ನೇಮಿಸಿಕೊಳ್ಳತಕ್ಕದ್ದು.

5) ಕೇಂದ್ರ ಸರ್ಕಾರದ ಪಾಲಿನ ಅನುದಾನವಾದ ರೂ. 1.30 ಕೋಟಿಗಳನ್ನು ಸ್ಥಳೀಯ ಸಂಪನ್ಮೂಲಗಳಿಂದ ಕ್ರೋಢೀಕರಿಸಿದ ಅನುದಾನವನ್ನು ವಿಜ್ಞಾನ ಕೇಂದ್ರ ಸ್ಥಾಪನೆಗೆ ಮಾತ್ರ ಉಪಯೋಗಿಸತಕ್ಕದ್ದು, ಯಾವುದೇ ಕಾರಣಕ್ಕೂ ಕ್ರೋಢೀಕರಿಸಿದ ಅನುದಾನವನ್ನು ಬೇರೆ ಕಾರ್ಯಚಟುವಟಿಕೆಗಳಿಗೆ ಉಪಯೋಗಿಸಬಾರದು.

6) ಉಪ ಪ್ರಾದೇಶಿಕ ವಿಜ್ಞಾನ ಕೇಂದ್ರಕ್ಕೆ ರಾಜ್ಯ ಸರ್ಕಾರ ಬಿಡುಗಡೆ ಮಾಡಲಾದಂತಹ ಅನುದಾನ ಹಾಗೂ ವಿಜ್ಞಾನ ಕೇಂದ್ರ ಕ್ರೋಢೀಕರಿಸಿದ ಅನುದಾನದ ಲೆಕ್ಕಪತ್ರಗಳನ್ನು ಮಂಜೂರು ಮಾಡುವ ಅಧಿಕಾರಿಯು ಸಮೀಕ್ಷೆಗಾಗಿ ಕೋರಿದ್ದಲ್ಲಿ ತಪ್ಪದೇ ಒದಗಿಸತಕ್ಕದ್ದು.

7) ಉಪ ಪ್ರಾದೇಶಿಕ ವಿಜ್ಞಾನ ಕೇಂದ್ರ ಸ್ಥಾಪನೆಗೆ ನೋಡಲ್ ಅಧಿಕಾರಿಯಾಗಿ ನಿರ್ದೇಶಕರು (ತಾಂತ್ರಿಕ) ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ, ಇವರನ್ನು ನೇಮಿಸಲಾಗಿದ್ದು, ವಿಜ್ಞಾನ ಕೇಂದ್ರ ಸ್ಥಾಪನೆಗೆ ತೊಂದರೆ ತೊಡಕುಂಟಾದಲ್ಲಿ ಇವರ ಮಾರ್ಗದರ್ಶನ ಪಡೆಯತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆ ಸರ್ಕಾರಿ ಆದೇಶ ಸಂಖ್ಯೆ: ಆಇ 01 ಟಿಎಫ್‌ಪಿ 2008, ದಿನಾಂಕ 16–05–2008ರ ಅಡಿಯಲ್ಲಿ ಇಲಾಖಾ ಪ್ರಧಾನ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿದ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಮದ್ಭಾವಿ ಎ. ಎಸ್.**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 420 ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

## COMMERCE AND INDUSTRIES SECRETARIAT

**Corrigendum**

No. CI 316 SPI 2008, Bangalore, dated 11-01-2012

**Sub:** Approval to purchase a portion of land and acquisition of balance and through KIADB for the proposal of M/s Bhoruka Power Corporation Ltd. to establish “300 MW Coal Based Thermal Power Plant”

**Read:** Govt. Order No.: CI 316 SPI 2008 dated 29-12-2011

***

In the Govt. Order No. CI 316 SPI 2008, dated 29-12-2011, in the 1st line of 1st para of the order portion please read as “M/s Bhoruka Energy Ltd., (Formerly M/s Bhoruka Power Corporation Ltd.,)” in place of “M/s Bhoruka Power Corporation Ltd.,”

By Order and in the name of the Governor of Karnataka

**Shivashankar Naik. L**

Desk Officer (Technical Cell) (I/c)

P.R. 421 Commerce & Industries Department

## ಕಾರ್ಮಿಕ ಸಚಿವಾಲಯ

**ವಿಷಯ :** ಉದ್ಯೋಗ ಮತ್ತು ತರಬೇತಿ ಇಲಾಖೆಯ ಅಧಿಕಾರಿಗಳಿಗೆ ಆರ್ಥಿಕ ಅಧಿಕಾರ ಪ್ರತ್ಯಾಯೋಜನೆ ಮಾಡುವ ಬಗೆಗಿನ ಆದೇಶವನ್ನು ಪರಿಷ್ಕರಿಸುವ ಬಗ್ಗೆ:–

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ: ಕಾಇ 74 ಇಟಿಎಂ 2009, ದಿನಾಂಕ 18–08–2009

2) ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರ ಪತ್ರ ಸಂಖ್ಯೆ ಉತಇ/ತರಬೇತಿ/ಆಡಳಿತ–3/ಸಿಆರ್–2/2007–08, ದಿನಾಂಕ 28–10–2010.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಉದ್ಯೋಗ ಮತ್ತು ತರಬೇತಿ ಇಲಾಖೆಯ ಅಧಿಕಾರಿಗಳಿಗೆ ಆರ್ಥಿಕ ಅಧಿಕಾರ ಪ್ರತ್ಯಾಯೋಜನೆ ಮಾಡಿ ಆದೇಶ ಹೊರಡಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರ ಪತ್ರದಲ್ಲಿ ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಇಲಾಖೆಯ ತರಬೇತಿ ವಿಭಾಗದಲ್ಲಿ ಕಾರ್ಯನಿರ್ವಹಿಸುತ್ತಿರುವ ಎಲ್ಲಾ ಜಂಟಿ ನಿರ್ದೇಶಕರುಗಳು ಒಂದೇ ಶ್ರೇಣಿಯ ಅಧಕಾರಿಗಳಾಗಿದ್ದಾಗ್ಯೂ ಕೇಂದ್ರ ಕಛೇರಿಯ ಜಂಟಿ ನಿರ್ದೇಶಕರಿಗೆ ಪ್ರತಿ ಕೈಗಾರಿಕಾ ತರಬೇತಿ ಸಂಸ್ಥೆಯ ಖರೀದಿ ಪ್ರಸ್ತಾವನೆಗೆ ಸಂಬಂಧಿಸಿದಂತೆ ವಿಭಾಗೀಯ ಕಚೇರಿ ಜಂಟಿ ನಿರ್ದೇಶಕರುಗಳಿಗಿಂತ ಹೆಚ್ಚಿನ ಆರ್ಥಿಕ ಅಧಿಕಾರ ಪ್ರತ್ಯಾಯೋಜನೆ ಮಾಡಲಾಗಿದ್ದು, ಕೇಂದ್ರ ಕಛೇರಿಯ ಜಂಟಿ ನಿರ್ದೇಶಕರಿಗೆ ಪ್ರತಿ ಕೈಗಾರಿಕಾ ತರಬೇತಿ ಸಂಸ್ಥೆಯ ಖರೀದಿ ಪ್ರಸ್ತಾವನೆಗೆ ಒಂದು ಬಾರಿಗೆ ಗರಿಷ್ಠ 2.00 ಲಕ್ಷದಂತೆ ಆರ್ಥಿಕ ಅಧಿಕಾರ ನೀಡಿ ಮಾರ್ಪಡಿತ ಆದೇಶ ಹೊರಡಿಸುವಂತೆ

ಕೋರಿರುತ್ತಾರೆ. ಅಲ್ಲದೇ, ಜಂಟಿ ನಿರ್ದೇಶಕರು (ತರಬೇತಿ), ಸಿಬ್ಬಂದಿ, ತರಬೇತಿ ಮತ್ತು ಸಂಶೋಧನಾ ಕೇಂದ್ರ, ಮಳವಳ್ಳಿ ಇವರು ಸಂಸ್ಥೆಯ ಮುಖ್ಯಸ್ಥರಾಗಿದ್ದು, ವಿಭಾಗೀಯ ಜಂಟಿ ನಿರ್ದೇಶಕರುಗಳ ಸಮಾನ ಹುದ್ದೆಯುಳ್ಳರಾಗಿರುತ್ತಾರೆಂದೂ ಸಂಸ್ಥೆಯ ಕಾರ್ಯನಿರ್ವಹಣೆಯ ಸಂಬಂಧ ಅವರಿಗೆ ಹೆಚ್ಚಿನ ವಿತ್ತಾಧಿಕಾರ ನೀಡುವ ಅವಶ್ಯಕತೆ ಇದ್ದು, ಅವರಿಗೂ ಸಹ ಇತರೆ ವಿಭಾಗೀಯ ಜಂಟಿ ನಿರ್ದೇಶಕರುಗಳಿಗೆ ನೀಡಿದ ವಿತ್ತಾಧಿಕಾರವನ್ನು ನೀಡುವುದು ಸೂಕ್ತವೆಂದು ತಿಳಿಸಿ ಪರಿಷ್ಕೃತ ಸರ್ಕಾರಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಾಇ 265 ಇಟಿಐ 2010, ಬೆಂಗಳೂರು, ದಿನಾಂಕ 21–01–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಸರ್ಕಾರಿ ಆದೇಶ ಸಂಖ್ಯೆ: ಕಾಇ 74 ಇಟಿಎಂ 2009 ದಿನಾಂಕ 18–08–2009ರಲ್ಲಿನ ಕ್ರಮ ಸಂಖ್ಯೆ 4ರ 4ನೇ ಕಲಂನಲ್ಲಿ ಜಂಟಿ ನಿರ್ದೇಶಕರು ಕೇಂದ್ರ ಸ್ಥಾನ ಇವರಿಗೆ ಪ್ರತಿ ಕೈಗಾರಿಕಾ ತರಬೇತಿ ಸಂಸ್ಥೆಗಳಿಗೆ ಅಗತ್ಯವಿರುವ ಸಾಮಾಗ್ರಿ ಮತ್ತು ಸಲಕರಣೆಗಳನ್ನು ಖರೀದಿಸಲು "ಪ್ರತಿ ಬಾರಿ ರೂ. 5.00 ಲಕ್ಷಗಳೆಂದು" ನಿಗಧಿಪಡಿಸಿರುವುದನ್ನು "ಪ್ರತಿ ಬಾರಿ ರೂ. 2.00 ಲಕ್ಷಗಳು" ಎಂದು ಮಾರ್ಪಡಿಸಲಾಗಿದೆ.

ಅಲ್ಲದೇ, ಜಂಟಿ ನಿರ್ದೇಶಕರು, ಸಿಬ್ಬಂದಿ, ತರಬೇತಿ ಮತ್ತು ಸಂಶೋಧನಾ ಕೇಂದ್ರ, ಮಳವಳ್ಳಿ ಇವರು ವಿಭಾಗೀಯ ಮಟ್ಟದ ಅಧಿಕಾರಿಗಳಿಗೆ ಸಮಾನಾಂತರವಾದ ಅಧಿಕಾರಿಯಾಗಿದ್ದು ಅವರು ವಿಭಾಗೀಯ ಮಟ್ಟದ ಅಧಿಕಾರಿಗಳಿಗೆ ನೀಡಿದ ಆರ್ಥಿಕ ವಿತ್ತಾಧಿಕಾರವನ್ನು ಚಲಾಯಿಸತಕ್ಕದ್ದು.

ಮುಂದುವರೆದು, ಎಲ್ಲಾ ಇಲಾಖಾ ಮುಖ್ಯಸ್ಥರು ಹಾಗೂ ಇತರ ಅಧಿಕಾರಿಗಳಿಗೆ ಸಾಮಾನ್ಯ ವಿತ್ತಾಧಿಕಾರ ಪರಿಷ್ಕರಿಸಿ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 2 ಟಿಎಫ್‌ಪಿ 2010 ದಿನಾಂಕ 30–04–2010ರಂದು ಆದೇಶ ಹೊರಡಿಸಿರುವುದರಿಂದ ಉದ್ಯೋಗ ಮತ್ತು ತರಬೇತಿ ಇಲಾಖೆಯು ತಮಗೆ ನೀಡಿರುವ ವಿಶೇಷ ವಿತ್ತಾಧಿಕಾರ ಅಥವಾ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 2 ಟಿಎಫ್‌ಪಿ 2010 ದಿನಾಂಕ 30–04–2010ರ ಸಾಮಾನ್ಯ ವಿತ್ತಾಧಿಕಾರಗಳಲ್ಲಿ ಯಾವುದಾದರೂ ಒಂದನ್ನು ಚಲಾಯಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 793 ವೆಚ್ಚ–9/11 ದಿನಾಂಕ 02–01–2012ರ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಜೆ. ಎಸ್. ವಿಶ್ವನಾಥಪ್ಪ**

ಪೀಠಾಧಿಕಾರಿ

ಪಿ.ಆರ್. 422 ಕಾರ್ಮಿಕ ಇಲಾಖೆ (ಉದ್ಯೋಗ ಮತ್ತು ತರಬೇತಿ)

## COMMERCE AND INDUSTRIES SECRETARIAT

**Sub :** Formation of Single Window Agency for monitoring mining leases in Districts regarding.

**Read :** Letter No. DMG/MLS/SWA/2011-12:5423 dated 15.12.2011 of Director, Department of Mines and Geology, Bangalore.

**Preamble:**

The State Government had referred several issues concerning illegal mining in the State, after framing comprehensive terms of reference to the Hon'ble Lokayukta for investigation under section 7 (2A) of Karnataka Lokayuktha act 1984. The Hon'ble Lokayuktha has submitted a detailed investigation report (part-II) to the State Government on 27-07-2011 containing many chapters and annexures. The State Government constituted High Level Committee under the chairmanship of the Additional Chief Secretary to advise the government regarding ways and means of implementation of recommendations contained in the Hon'ble Lokayukta's report. The High Level Committee has submitted its final report to the State Government on 24-10-2011.

The High Level Committee in its report has recommended to constitute single window agency at the District level headed by the Deputy Commissioner for effective monitoring of extraction of ore, and transportation by lease holders/issue of NOCs for grant of mining lease, trading in Iron Ore, illegal stockyards, purchase of ore by the end users etc., and the Committee/Agency should regularly watch and monitor the entire gamut of work undertaken by mine lessees and rigorously enforce compliance with law.

The Government has agreed in principle to constitute single window agency as per recommendation of High Level Committee.

The Director, Mines and Geology in his letter dated 15-12-2011 read above has suggested that the tasks proposed to be assigned to the single window agency may be entrusted to the taskforce already constituted under the chairmanship of Deputy Commissioner at District levels to look in to the matters/issues concerning illegal mining activities, vide the Government Order No. CI. 194:MMM 2005, dated 16-11-2005.

The proposal has been examined in detail and the following order has been made:-

**Government Order No. CI 283 MMM 2011, Bangalore, dated 21-01-2012**

In the circumstances explained in the preamble, the Task Force Committee under the chairmanship of Deputy Commissioner already constituted vide G.O. dated 16-11-2005 shall act as single window committee and shall perform the following tasks in addition to the functions entrusted earlier:-

i) Issue of NOCs for grant of mining leases after field inspection;
ii) Effective monitoring of extraction of ore by the lease holders within the permitted limit;
iii) To check transportation of ore by lease holders, like, overloading, illegal transportation without permits etc.,

iv) To check illegal trading in iron ore;
v) To control illegal stockyards;
vi) Purchase of ore by the end users etc.,

By Order and in the name of the Governor of Karnataka
**M. V. Shivasubramani**
Under Secretary to Government (Mines)
Commerce & Industries Department

P.R. 423

## INFRASTRUCTURE DEVELOPMENT SECRETARIAT

**Sub :** Release of funds for engaging the services of MC&A as Branding and Communication Agency of Infrastructure Development Department.

**Read :** 1) G.O. No. IDD 138 IDM 2011, dated 28-07-2011
2) Letter No. IDD/CSD/2621, dated 16-12-2011 from DGM, MC&A, Bangalore.

**Preamble:**

In the G.O. read at (1) above, sanction was accorded for engaging the services of Marketing Consultants & Agencies ltd., Bangalore as Branding & Communication Agency of IDD with a view to project various activities of the Department before the GIM 2012.

In the letters read at (2) above, the Deputy General Manager, MC&A has submitted proposals towards providing consultancy services of Branding & Communication for IDD for the month of November 2011 for an amount of Rs. 2.00 lakhs and requested the Government for release of amount in this regard.

Hence the following orders.

**Government Order No. IDD 138 IDM 2011, Bangalore, dated 20-01-2012**

Under the circumstances explained in the preamble, Government is pleased to accord sanction to release Rs. 2.00 lakhs (Rupees two lakhs only) for the month of November 2011 to Managing Director, MC&A, Bangalore towards providing consultancy services of Branding & Communication for IDD for the progress achieved by MC&A Bangalore.

The expenditure shall be met out under the Budget Head 3451-00-090-1-06-059 infrastructure preliminary studies other expenditure (plan) 2011-12.

The Managing Director, MC&A, Bangalore is authorized to draw the amount on a payees receipt duly countersigned by the under secretary to government, Infrastructure Development Department from the State Huzoor Treasury, Bangalore.

This order is issued in accordance with the delegation of financial powers to principal secretary/secretary to govt., vide G.O. No. FD 1 TFP 2008, dated 16-05-2008.

By Order and in the name of the Governor of Karnataka
**R. Shivalingaiah**
Under Secretary to Government
Infrastructure Development Department

P.R. 424

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವಾಲಯ

ವಿಷಯ : ರಾಜ್ಯದಲ್ಲಿ ಮಹಿಳಾ ಕಿಸಾನ್ ಸಶಕ್ತೀಕರಣ ಪರಿಯೋಜನೆ (MKSP) ಯೋಜನೆಯ ಅನುಷ್ಠಾನದ ಬಗ್ಗೆ ಸಮಿತಿ ರಚಿಸುವ ಕುರಿತು.

ಓದಲಾಗಿದೆ : 1) ಕೇಂದ್ರ ಸರ್ಕಾರದ ಗ್ರಾಮೀಣಾಭಿವೃದ್ಧಿ ಮಂತ್ರಾಲಯ ಸಂಖ್ಯೆ : D.O. No. J. 11011/01/2010-SGSY-1 ದಿನಾಂಕ : 24–12–2010.
2) ಕೇಂದ್ರ ಸರ್ಕಾರದ ಗ್ರಾಮೀಣಾಭಿವೃದ್ಧಿ ಮಂತ್ರಾಲಯ ಸಂಖ್ಯೆ : D.O. No. J. 11011/01/2010-SGSY-I ದಿನಾಂಕ : 05–10–2011.
3) ಕೇಂದ್ರ ಸರ್ಕಾರದ ಗ್ರಾಮೀಣಾಭಿವೃದ್ಧಿ ಮಂತ್ರಾಲಯ ಸಂಖ್ಯೆ : K-11011/37/2011/MKSP/Ktk ದಿನಾಂಕ : 28–09–2011.

**ಪ್ರಸ್ತಾವನೆ :**

ಕೇಂದ್ರ ಸರ್ಕಾರವು ಇತ್ತೀಚೆಗೆ ಮಹಿಳಾ ಕಿಸಾನ್ ಸಶಕ್ತೀಕರಣ ಪರಿಯೋಜನೆ (ಎಂ.ಕೆ.ಎಸ್.ಪಿ) ಯನ್ನು ಜಾರಿಗೊಳಿಸಿದ್ದು, ಈ ಯೋಜನೆಯು ಗ್ರಾಮೀಣಾ ಬಡವರಲ್ಲಿ ಅತೀ ಬಡವರಾದ ಮಹಿಳೆಯರಿಗೆ ಕೃಷಿಯಲ್ಲಿ ತರಬೇತಿ ನೀಡಿ, ಅವರನ್ನು ಆರ್ಥಿಕವಾಗಿ ಸಬಲೀಕರಣಗೊಳಿಸುವುದು ಈ ಯೋಜನೆಯ ಮುಖ್ಯ ಉದ್ದೇಶ. ಈ ಯೋಜನೆಗೆ ಕೇಂದ್ರ ಸರ್ಕಾರ/ರಾಜ್ಯ ಸರ್ಕಾರಗಳು ಕ್ರಮವಾಗಿ ಶೇ: 75:25 ರ ಅನುಪಾತದಲಿ ಅನುದಾನ ಭರಿಸುವುದು. ಕೇಂದ್ರ ಸರ್ಕಾರವು ತನ್ನ ಪಾಲಿನ ಶೇ. 75 ರ ಅನುದಾನವನ್ನು 25:50:25 ರಂತೆ 3 ಕಂತುಗಳಲ್ಲಿ ನೀಡಲಾಗುವುದು. ಇದರನ್ವಯ ರಾಜ್ಯ ಸರ್ಕಾರವು ಶೇ. 25 ರ ಅನುದಾನವನ್ನು ಭರಿಸಬೇಕಾಗಿರುತ್ತದೆ.

ಈ ಯೋಜನೆಯನ್ನು ರಾಮನಗರ ಮತ್ತು ಚಿತ್ರದುರ್ಗ ಜಿಲ್ಲೆಗಳಲ್ಲಿ ಅನುಷ್ಠಾನಗೊಳಿಸಲು ಮೆ. ಗ್ರೀನ್ ಫೌಂಡೇಶನ್ ಸಂಸ್ಥೆಯು ಮೊದಲಿಗೆ ಮುಂದೆ ಬಂದಿದ್ದು, ಈ ಯೋಜನೆಯನ್ನು ಅನುಷ್ಠಾನಗೊಳಿಸಲು ಕೇಂದ್ರ ಸರ್ಕಾರವು ಒಟ್ಟು 6.25 ಕೋಟಿಗಳಿಗೆ ಅನುಮೋದನೆ ನೀಡಿದ್ದು, ಕೇಂದ್ರದ

ಪಾಲು 4.69 ಹಾಗೂ ರಾಜ್ಯದ ಪಾಲು 1.56 ರೂಗಳಾಗಿರುತ್ತದೆ. ಕೇಂದ್ರ ಸರ್ಕಾವು ಶೇ. 25 ರ ಮೊದಲನೇ ಕಂತಿನ ಅನುದಾನ ಬಿಡುಗಡೆ ಮಾಡಿರುತ್ತದೆ.

ರಾಜ್ಯ ಸರ್ಕಾರವು ರಾಜ್ಯದಲ್ಲಿ ಮಹಿಳಾ ಕಿಸಾನ್ ಸಶಕ್ತೀಕರಣ ಪರಿಯೋಜನೆ (ಎಂ.ಕೆ.ಎಸ್.ಪಿ) ಅನುಷ್ಠಾನದ ಪ್ರಗತಿ ಪರಿಶೀಲಿಸಲು ಮತ್ತು ಬೇರೆ ಇಲಾಖೆಗಳೊಂದಿಗೆ ಸಮನ್ವಯ ಸಾಧಿಸಲು ರಾಜ್ಯ ಮಟ್ಟದಲ್ಲಿ ಉತಸ್ತುವಾರಿ ಮತ್ತು ಪರಿಶೀಲನಾ ಸಮಿತಿ ಹಾಗೂ ತಾಂತ್ರಿಕ ಸಮಿತಿ ರಚಿಸಬೇಕಾಗಿರುತ್ತದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ : 70 : ಎಸ್.ಜಿ.ವೈ : (ಇನ್‌ಫ್ರಾ) : 2011, ಬೆಂಗಳೂರು, ದಿನಾಂಕ: 7ನೇ ಜನವರಿ 2012**

| ಕ್ರಮ ಸಂಖ್ಯೆ | ಅಧಿಕಾರಿಯ ಪದನಾಮ | |
|---|---|---|
| 1. | ಪ್ರಧಾನ ಕಾರ್ಯದರ್ಶಿಗಳು ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ | ಅಧ್ಯಕ್ಷರು |
| 2. | ಆಯುಕ್ತರು, ಕೃಷಿ ಇಲಾಖೆ ಅಥವಾ ಅವರ ಪ್ರತಿನಿಧಿಗಳು | ಸದಸ್ಯರು |
| 3. | ಆಯುಕ್ತರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಅಥವಾ ಅವರ ಪ್ರತಿನಿಧಿಗಳು | ಸದಸ್ಯರು |
| 4. | ಆಯುಕ್ತರು, ತೋಟಗಾರಿಕೆ ಇಲಾಖೆ ಅಥವಾ ಅವರ ಪ್ರತಿನಿಧಿಗಳು | ಸದಸ್ಯರು |
| 5. | ಆಯುಕ್ತರು, ಪಶುಸಂಗೋಪನ ಇಲಾಖೆ ಅಥವಾ ಅವರ ಪ್ರತಿನಿಧಿಗಳು | ಸದಸ್ಯರು |
| 6. | ಆಯುಕ್ತರು, ಆರೋಗ್ಯ ಇಲಾಖೆ ಅಥವಾ ಅವರ ಪ್ರತಿನಿಧಿಗಳು | ಸದಸ್ಯರು |
| 7. | ಪ್ರತಿನಿಧಿಗಳು – ಯೋಜನಾ ಅನುಷ್ಠಾನದ ಸಂಸ್ಥೆ | ಸದಸ್ಯರು |
| 8. | ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, (ಸಂಬಂಧಿಸಿದ ಜಿಲ್ಲಾ ಪಂಚಾಯತ್) | ಸದಸ್ಯರು |
| 9. | ನಿರ್ದೇಶಕರು, (ಸ್ವಯಂ ಉದ್ಯೋಗ ಕಾರ್ಯಕ್ರಮ) ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ | ಸದಸ್ಯ ಕಾರ್ಯದರ್ಶಿ |

. ಎನ್.ಆರ್.ಎಲ್.ಎಂ. ಯೋಜನೆ ಅನುಷ್ಠಾನಕ್ಕೆ ಕರ್ನಾಟಕ ರಾಜ್ಯ ಗ್ರಾಮೀಣ ಜೀವನೋಪಾಯ ಸಂವರ್ಧನಾ ಸಂಸ್ಥೆ, (ಕೆ.ಎಸ್.ಆರ್.ಎಲ್.ಪಿ.ಎಸ್.) ಅಸ್ತಿತ್ವಕ್ಕೆ ಬಂದ ನಂತರ ಈ ಸಮಿತಿಯ ಸದಸ್ಯ ಕಾರ್ಯದರ್ಶಿಗಳವರು ಮಿಷನ್ ನ ನಿರ್ದೇಶಕರು ಆಗುತ್ತಾರೆ.

**ರಾಜ್ಯ ಮಟ್ಟದ ಉಸ್ತುವಾರಿ ಮತ್ತು ಪರಿಶೀಲನಾ ಸಮಿತಿಯ ಕರ್ತವ್ಯ ಮತ್ತು ಜವಾಬ್ದಾರಿಗಳು :**

- ಮಹಿಳಾ ಕಿಸಾನ್ ಸಶಕ್ತೀಕರಣ ಪರಿಯೋಜನೆ (ಎಂ.ಕೆ.ಎಸ್.ಪಿ) ಪ್ರಸ್ತಾವನೆಗಳನ್ನು ಪಡೆಯುವ ಬಗ್ಗೆ ನೀತಿ ರೂಪಿಸುವುದು.
- ಸಮಿತಿಯು ಅವಶ್ಯಕತೆಗನುಗುಣವಾಗಿ ಯಾವುದೇ ಅಧಿಕಾರಿಗಳನ್ನು ಸಮಿತಿಗೆ ಸೇರ್ಪಡಿಸಿಕೊಳ್ಳಬಹುದು/ಸಭೆಗೆ ಆಹ್ವಾನಿಸಬಹುದು.
- ಪ್ರತಿ ಮೂರು ತಿಂಗಳಿಗೊಮ್ಮೆ ಸಭೆ ಸೇರಿ ಉಸ್ತುವಾರಿ ಮತ್ತು ಪ್ರಗತಿ ಪರಿಶೀಲನೆ ನಡೆಸುವುದು ಹಾಗೂ ಪ್ರಗತಿಯ ವರದಿಯನ್ನು ಕಾಲಕಾಲಕ್ಕೆ ಪರಿಶೀಲಿಸಿ, ಅಂತರ್ ಜಾಲದಲ್ಲಿ ಅನುಷ್ಠಾನ ಸಂಸ್ಥೆಯು ಅಳವಡಿಸಿರುವುದರ ಬಗ್ಗೆ ಉಸ್ತುವಾರಿ ವಹಿಸುವುದು.
- ಕ್ರಿಯಾ ಯೋಜನೆಯನ್ನು ಜಾರಿಗೊಳಿಸುವಲ್ಲಿ ಸಹಕರಿಸುವುದು.
- ಎಂ.ಕೆ.ಎಸ್.ಪಿ ಯೋಜನೆಯ ಅನುಷ್ಠಾನದ ಬಗ್ಗೆ ಸಮಿತಿಯು ಸೂಕ್ತ ಸಲಹೆ ನೀಡುವುದು.

**ತಾಂತ್ರಿಕ ಸಮಿತಿ :**

| ಕ್ರಮ ಸಂಖ್ಯೆ | ಅಧಿಕಾರಿಯ ಪದನಾಮ | |
|---|---|---|
| 1. | ಮಿಷನ್ ನಿರ್ದೇಶಕರು, ಕೆ.ಎಸ್.ಆರ್.ಎಲ್.ಎಂ. (ಎನ್.ಆರ್.ಎಲ್.ಎಂ) | ಅಧ್ಯಕ್ಷರು |
| 2. | ನಿರ್ದೇಶಕು, ಜಲಾನಯನ ಅಭಿವೃದ್ಧಿ ಇಲಾಖೆ | ಸದಸ್ಯರು |
| 3. | ನಿರ್ದೇಶಕರು, ಪಶುಸಂಗೋಪನ ಇಲಾಖೆ | ಸದಸ್ಯರು |
| 4. | ನಿರ್ದೇಶಕರು, ಮೀನುಗಾರಿಕೆ ಇಲಾಖೆ | ಸದಸ್ಯರು |
| 5. | ನಿರ್ದೇಶಕರು, ಕೃಷಿ ಇಲಾಖೆ | ಸದಸ್ಯರು |
| 6. | ವ್ಯವಸ್ಥಾಪಕ ನಿರ್ದೇಶಕರು ಸಿ.ಎ.ಪಿ.ಇ.ಸಿ. | ಸದಸ್ಯರು |
| 7. | ಜಂಟಿ ನಿರ್ದೇಶಕರು (ಸ್ವಉಕಾ), ಗಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ | ಸದಸ್ಯರು |
| 8. | ಯೋಜನಾ ನಿರ್ದೇಶಕರು, (ಸ್ತ್ರೀಶಕ್ತಿ) ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ | ಸದಸ್ಯರು |
| 9. | ವಿಶೇಷ ಯೋಜನೆಗಳ ಯೋಜನಾ ಉತಸ್ತುವಾರಿ ಅಧಿಕಾರಿಗಳು, ಕೆ.ಎಸ್.ಆರ್.ಎಲ್.ಪಿ.ಎಸ್. | ಸದಸ್ಯ ಕಾರ್ಯದರ್ಶಿ |

**ತಾಂತ್ರಿಕ ಸಮಿತಿಯ ಕರ್ತವ್ಯ ಮತ್ತು ಜವಾಬ್ದಾರಿಗಳು :**

- ಕ್ರಿಯಾ ಯೋಜನೆಯನ್ನು ಅನುಷ್ಠಾನಗೊಳಿಸುವಲ್ಲಿ ಅನುಷ್ಠಾನ ಸಂಸ್ಥೆಗೆ ಸಂಪೂರ್ಣ ಸಹಕಾರ ಮತ್ತು ಮಾರ್ಗದರ್ಶನ ನೀಡುವುದು.
- ಯೋಜನೆಯ ಗುಣಮಟ್ಟದ ಬಗ್ಗೆ ಪರಿಶೀಲಿಸುವುದು.
- ಪ್ರಗತಿಯ ವರದಿಯನ್ನು ಕಾಲಕಾಲಕ್ಕೆ ಪರಿಶೀಲಿಸಿ, ಪ್ರಗತಿ ವರದಿಯನ್ನು ಅಂತರ್ ಜಾಲದಲ್ಲಿ ಅನುಷ್ಠಾನ ಸಂಸ್ಥೆಯು ಅಳವಡಿಸಿರುವುದರ ಬಗ್ಗೆ ಉಸ್ತುವಾರಿ.

ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಆಗ್ಗಿಂದಾಗ್ಗೆ ನೀಡುವ ಎಲ್ಲಾ ಆದೇಶಗಳನ್ನು ಕಡ್ಡಾಯವಾಗಿ ಪಾಲಿಸಿ ಕ್ರಮ ವಹಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಅಮಿತಾ ಪ್ರಸಾದ್**

ಸರ್ಕಾರದ ಅಧೀನ ಕಾರ್ಯದರ್ಶಿ

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

ಪಿ.ಆರ್.425

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

ವಿಷಯ : ಕರ್ನಾಟಕ ಪಶುವೈದ್ಯಕೀಯ, ಪಶು ಹಾಗೂ ಮೀನುಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬೀದರ್‌ನ ಬಿ.ವಿ.ಎಸ್ಸಿ & ಎ.ಹೆಚ್. ವಿದ್ಯಾರ್ಥಿಗಳ ಇಂಟರ್ನ್‌ಷಿಪ್ ಮಾಸಿಕ ಭತ್ಯೆಯನ್ನು ಹೆಚ್ಚಿಸುವಿಕೆ.

ಓದಲಾಗಿದೆ :
1) ಅಧ್ಯಕ್ಷರು, ಪಶುವೈದ್ಯಕೀಯ ವಿದ್ಯಾರ್ಥಿಗಳ ಕ್ರಿಯಾ ಸಮಿತಿ, ಕರ್ನಾಟಕ ಪಶುವೈದ್ಯಕೀಯ, ಪಶು ಹಾಗೂ ಮೀನುಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬೀದರ್ ಇವರ ಮನವಿ.
2) ಪತ್ರ ಸಂಖ್ಯೆ: ಕುಪ/ಪಸಂಮೀ–ಇಮಾಭ/2011–12/II/2659/2443 ದಿನಾಂಕ: 29–08–2011.
3) ಪತ್ರ ಸಂಖ್ಯೆ: ಕುಪ/ಪಸಂಮೀ–ಇಮಾಭ/2011–12/II/2669 ದಿನಾಂಕ: 05–09–2011.
4) ಪತ್ರ ಸಂಖ್ಯೆ: ಕುಪಪ್ರಾಕಬೆಂ/ಪಸಂಮೀಇಮಾಭ/2011–12/00 ದಿನಾಂಕ: 24–11–2011.

ಪ್ರಸ್ತಾವನೆ :

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಮನವಿಯಲ್ಲಿ ಅಧ್ಯಕ್ಷರು, ಪಶುವೈದ್ಯಕೀಯ ವಿದ್ಯಾರ್ಥಿಗಳ ಕ್ರಿಯಾ ಸಮಿತಿ, ಕರ್ನಾಟಕ ಪಶುವೈದ್ಯಕೀಯ, ಪಶು ಹಾಗೂ ಮೀನುಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬೀದರ್ ಇವರು ಪಶುವೈದ್ಯಕೀಯ ವಿದ್ಯಾರ್ಥಿಗಳು ಬಹುತೇಕ ಗ್ರಾಮೀಣ ಪ್ರದೇಶದಿಂದ ಆರ್ಥಿಕವಾಗಿ ಮಧ್ಯಮ ಮತ್ತು ಕೆಳಸ್ತರ ರೈತ ಕುಟುಂಬದಿಂದ ಬಂದವರಾಗಿರುವುದರಿಂದ ಕಿರಿಯ ಪಶುವೈದ್ಯರ ಇಂಟರ್ನ್‌ಷಿಪ್ ಭತ್ಯೆಯನ್ನು ರೂ. 5,400/– ರಿಂದ 11,000/–ಕ್ಕೆ ಮತ್ತು ಪ್ರಯಾಣ ಭತ್ಯೆಯನ್ನು ರೂ. 300/– ರಿಂದ ರೂ. 5000/–ಕ್ಕೆ ಹೆಚ್ಚಿಸುವಂತೆ ಕೋರಿರುತ್ತಾರೆ.

2. ಮೇಲೆ ಓದಲಾದ ಕ್ರಮ ಸಂಖ್ಯೆ (2), (3) ಮತ್ತು (4) ರ ಪತ್ರಗಳಲ್ಲಿ ಕುಲಪತಿಗಳು, ಕರ್ನಾಟಕ ಪಶುವೈದ್ಯಕೀಯ, ಪಶು ಹಾಗೂ ಮೀನುಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬೀದರ್ ಇವರು ಪ್ರಸ್ತುತ ವಿಶ್ವವಿದ್ಯಾಲಯದಲ್ಲಿ 5 ವರ್ಷ ಅವಧಿಯ B.V.Sc. & AH (ಪಶುವೈದ್ಯಕೀಯ ಕೋರ್ಸ್) ಮತ್ತು 4 ವರ್ಷ ಅವಧಿಯ B.Tech (D.Tech) (ಹೈನುಗಾರಿಕೆ ಕೋರ್ಸ್) ಮತ್ತು B.F.Sc. (ಮೀನುಗಾರಿಕೆ ಕೋರ್ಸ್) ಸ್ನಾತಕ ಪದವಿ ಕೋರ್ಸ್‌ಗಳು ಇರುತ್ತದೆಂದು ತಿಳಿಸಿರುತ್ತಾರೆ. ಭಾರತೀಯ ಪಶುವೈದ್ಯಕೀಯ ಪರಿಷತ್ತು (IVC) ಹಾಗೂ ಭಾರತೀಯ ಕೃಷಿ ಅನುಸಂಧಾನ ಪರಿಷತ್ತು (ICAR) ಶೈಕ್ಷಣಿಕ ನಿಯಮಾವಳಿಗಳಂತೆ ನಿಗದಿತ ಪಠ್ಯಕ್ರಮದ ಅನುಸಾರ 9 ಸೆಮಿಸ್ಟರ್‌ಗಳನ್ನು ಪೂರೈಸಿದ ನಂತರ ವಿದ್ಯಾರ್ಥಿಗಳು ಕಡ್ಡಾಯವಾಗಿ ಆರು ತಿಂಗಳ ಅವಧಿಗೆ ಇಂಟರ್ನ್‌ಷಿಪ್ ಮತ್ತು ಇನ್ ಪ್ಲಾಂಟ್ ತರಬೇತಿಗಳನ್ನು ರಾಜ್ಯ ವಿವಿಧ ಪಶುವೈದ್ಯಕೀಯ ಆಸ್ಪತ್ರೆಗಳಲ್ಲಿ, ಜಾನುವಾರು ಕ್ಷೇತ್ರಗಳಲ್ಲಿ ಡೈರಿ ಮತ್ತು ಆಹಾರ ಸಂಸ್ಕರಣಾ ಘಟಕಗಳಲ್ಲಿ ನಿರ್ವಹಿಸಬೇಕಾಗಿದ್ದು ತರಬೇತಿ ಅವಧಿಯಲ್ಲಿ ಕಾಲೇಜಿನ ಆವರಣದಿಂದ ಹೊರಗುಳಿದು ಊಟ/ವಸತಿ ಸೌಕರ್ಯಗಳನ್ನು ತಾವೇ ಪೂರೈಸಿಕೊಳ್ಳಬೇಕಾಗಿರುತ್ತದೆಂದು ತಿಳಿಸಿರುತ್ತಾರೆ. ಕಳೆದ ಐದು ವರ್ಷಗಳಿಂದ ಇಂಟರ್ನ್‌ಷಿಪ್ ತರಬೇತಿಯಲ್ಲಿರುವ ಪ್ರತಿಯೊಬ್ಬ ವಿದ್ಯಾರ್ಥಿ ರೂ. 5,400/– ಮಾಸಿಕ ಭತ್ಯೆ (ರಾಜ್ಯ ಸರ್ಕಾರದಿಂದ ರೂ. 5,000/– ಮತ್ತು ಭಾರತೀಯ ಕೃಷಿ ಅನುಸಂಧಾನ ಪರಿಷತ್ತಿನಿಂದ ರೂ. 400/–) ಮತ್ತು ಆರು ತಿಂಗಳ ಅವಧಿಗೆ ರೂ. 300/– ಪ್ರವಾಸ ಭತ್ಯೆ (ರಾಜ್ಯ ಸರ್ಕಾರದಿಂದ ರೂ. 100/– ಮತ್ತು ಭಾರತೀಯ ಕೃಷಿ ಅನುಸಂಧಾನ ಪರಿಷತ್ತಿನಿಂದ ರೂ. 200/– ಹಾಗೂ ಇನ್‌ಪ್ಲಾಂಟ್ ತರಬೇತಿ ಪಡೆಯುತ್ತಿರುವ ಪ್ರತಿಯೊಬ್ಬ ವಿದ್ಯಾರ್ಥಿಯು ಕರ್ನಾಟಕ ಹಾಲು ಮಹಾಮಂಡಳಿ (ಕೆ.ಎಂ.ಎಫ್) ವತಿಯಿಂದ ಬೆಂಗಳೂರಿಗೆ ಸೀಮಿತವಾಗಿ ರೂ. 2000/– ಮಾಸಿಕ ಭತ್ಯೆ ಮತ್ತು ಭಾರತೀಯ ಕೃಷಿ ಅನುಸಂಧಾನ ಪರಿಷತ್ತಿನಿಂದ ರೂ. 400/– ಮಾಸಿಕ ಭತ್ಯೆ ಪಡೆಯುತ್ತಿದ್ದಾರೆಂದು ತಿಳಿಸಿರುತ್ತಾರೆ. ಅವಶ್ಯಕ ವಸ್ತುಗಳ ಬೆಲೆ ಏರಿಕೆ, ಪ್ರಯಾಣದ ವೆಚ್ಚ ಅಧಿಕವಾಗಿರುವುದರಿಂದ ಹಾಗೂ ಸ್ನಾತಕ ಪದವಿಯಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳು ಕೃಷಿ ಕುಟುಂಬ ಮತ್ತು ಗ್ರಾಮೀಣ ಹಿನ್ನೆಲೆಯುಳ್ಳವರಾಗಿದ್ದು ತರಬೇತಿ ಅವಧಿಯಲ್ಲಿ ದೈನಂದಿನ ನಿರ್ವಹಣೆಗಾಗಿ ಆರ್ಥಿಕ ಮುಗ್ಗಟ್ಟು ಎದುರಿಸುತ್ತಿರುವುದರಿಂದ ಇಂಟರ್ನ್‌ಷಿಪ್ ಭತ್ಯೆಯನ್ನು ಮಾಸಿಕ ರೂ. 5,000/– ರಿಂದ ರೂ. 11,000/– ಕ್ಕೆ ಹೆಚ್ಚಿಸುವಂತೆ ಮತ್ತು ಪ್ರವಾಸ ಭತ್ಯೆಯನ್ನು ರೂ. 100/– ರಿಂದ ರೂ. 5000/–ಕ್ಕೆ ಹೆಚ್ಚಿಸುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ಅಂತಿಮ ವರ್ಷದ ಬಿ.ವಿ.ಎಸ್ಸಿ & ಎಹೆಚ್, ಬಿ.ಟೆಕ್ (ಡಿ.ಟೆಕ್), ಬಿ.ಎಫ್.ಎಸ್ಸಿ. ಕೋರ್ಸಿನ ಒಟ್ಟು 218 ವಿದ್ಯಾರ್ಥಿಗಳು ಫೆಬ್ರವರಿ 2012 ಇಂದ 6 ತಿಂಗಳ ಅವಧಿಗೆ ಇಂಟರ್ನ್‌ಷಿಪ್ ಮತ್ತು ಇನ್‌ಪ್ಲಾಂಟ್ ತರಬೇತಿಗಳಿಗೆ ಹಾಜರಾಗುತ್ತಿದ್ದು, ಆ ವಿದ್ಯಾರ್ಥಿಗಳಿಗೆ ಇಂಟರ್ನ್‌ಷಿಪ್ ಮತ್ತು ಇನ್‌ಪ್ಲಾಂಟ್ ತರಬೇತಿಗಳ ಮಾಸಿಕ ಭತ್ಯೆ ಪರಿಷ್ಕರಣೆಯಿಂದ ತಗಲಬಹುದಾದ ಅಂದಾಜು ರೂ. 1,54,78,000/– ಮೊತ್ತವನ್ನು ಹೆಚ್ಚುವರಿ ಅನುದಾನವಾಗಿ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

3. ಕುಲಪತಿಗಳ ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಪಶುವೈದ್ಯಕೀಯ ವಿಶ್ವವಿದ್ಯಾಲಯದ ಇಂಟರ್ನ್‌ಷಿಪ್ ಮತ್ತು ಇನ್‌ಪ್ಲಾಂಟ್ ತರಬೇತಿಗೆ ಹಾಜರಾಗುವ ಪ್ರತಿಯಬ್ಬ ಬಿ.ವಿ.ಎಸ್ಸಿ & ಎಹೆಚ್ ಬಿ.ಟೆಕ್ (ಡಿ.ಟೆಕ್), ಬಿ.ಎಫ್.ಎಸ್ಸಿ. ಸ್ನಾತಕ ವಿದ್ಯಾರ್ಥಿಯು ಕಳೆದ 5 ವರ್ಷದಿಂದ ಅಂದರೆ 2006 ರಿಂದ ರೂ. 5,400/– ಮಾಸಿಕ ಭತ್ಯೆ ಮತ್ತು ರೂ. 300/– ಪ್ರವಾಸ ಭತ್ಯೆ ಪಡೆಯುತ್ತಿದ್ದು, ಸದರಿ ಭತ್ಯೆಗಳನ್ನು ಇದುವರೆಗೂ ಪರಿಷ್ಕರಿಸಿರುವುದಿಲ್ಲ. ತರಬೇತಿಯಲ್ಲಿರುವ ಬಹುತೇಕ ವಿದ್ಯಾರ್ಥಿಗಳು ಕೃಷಿ ಕುಟುಂಬ ಮತ್ತು ಗ್ರಾಮೀಣ ಹಿನ್ನೆಲೆಯಿಂದ ಬಂದವರಾಗಿದ್ದು ತರಬೇತಿ ಅವಧಿಯಲ್ಲಿ ಕಾಲೇಜಿನ ಆವರಣದಿಂದ ಹೊರಗುಳಿದು ಊಟ/ವಸತಿ ಸೌಕರ್ಯಗಳನ್ನು ಸ್ವತಃ ಒದಗಿಸಿಕೊಳ್ಳಬೇಕಾಗದ್ದು ಪ್ರಸ್ತುತ ಆಹಾರ

ಮತ್ತು ಪ್ರವಾಸದ ವೆಚ್ಚಗಳು ದುಪ್ಪಟ್ಟಾಗಿರುವುದರಿಂದ ವಿದ್ಯಾರ್ಥಿಗಳಿಗೆ ಆರ್ಥಿಕವಾಗಿ ತೊಂದರೆಯಾಗಿರುವ ಜೊತೆಗೆ ದೈನಂದಿನ ನಿರ್ವಹಣೆಯೂ ಸಹ ಕಷ್ಟಕರವಾಗಿರುತ್ತದೆ. ಪಶ್ಚಿಮ ಬಂಗಾಳ ಸರ್ಕಾರ ಅಲ್ಲಿನ ಪಶುವೈದ್ಯಕೀಯ ವಿದ್ಯಾರ್ಥಿಗಳ ಇಂಟರ್ನ್‌ಷಿಪ್ ಮಾಸಿಕ ಭತ್ಯೆಯನ್ನು ರೂ. 4880/– ರಿಂದ ರೂ. 10,000/– ಕ್ಕೆ ಹೆಚ್ಚಿಸಿದೆ. ಅಲ್ಲದೇ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯು ಗೃಹ ವೈದ್ಯ, ಸ್ನಾತಕೋತ್ತರ ಮತ್ತು ಎಂಸಿಹೆಚ್/ಡಿಎಂ/ಫೆಲೋಶಿಪ್ (ಸೂಪರ್ ಸ್ಪೆಷಾಲಿಟಿ) ವಿದ್ಯಾರ್ಥಿಗಳ ಮಾಸಿಕ ಶಿಷ್ಯವೇತನವನ್ನು ರೂ. 17,000 ರಿಂದ ರೂ. 30,000/–ಕ್ಕೆ ಪರಿಷ್ಕರಿಸಿದೆ. ಪ್ರಸ್ತುತ ಅವಶ್ಯಕ ವಸ್ತುಗಳ ಬೆಲೆ ಹೆಚ್ಚಳವಾಗಿರುವುದರಿಂದ ಮತ್ತು ಪ್ರಯಾಣ ವೆಚ್ಚ ಅಧಿಕಗೊಂಡಿರುವದರಿಂದ ಇಂಟರ್ನ್‌ಷಿಪ್ ಮಾಸಿಕ ತರಬೇತಿ ಭತ್ಯೆಯನ್ನು ಪರಿಷ್ಕರಿಸುವುದು ಸೂಕ್ತವಾಗಿರುತ್ತದೆ. ಈ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರ, ವಿದ್ಯಾರ್ಥಿಗಳ ಹಿತದೃಷ್ಟಿಯಿಂದ ಬಿ.ವಿ.ಎಸ್ಸಿ & ಎ.ಹೆಚ್. ವಿದ್ಯಾರ್ಥಿಗಳಿಗೆ ಇಂಟರ್ನ್‌ಷಿಪ್ ಮಾಸಿಕ ಭತ್ಯೆಯನ್ನು ಪ್ರಸ್ತುತ ರೂ. 5000/– ದಿಂದ ರೂ. 11,000/– ಕ್ಕೆ ಹೆಚ್ಚಿಸಲು ತೀರ್ಮಾನಿಸಿದೆ. ಆದ್ದರಿಂದ, ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಪಸಂಮೀ 345 ಪಅಸೇ 2011, ಬೆಂಗಳೂರು, ದಿನಾಂಕ: 18ನೇ ಜನವರಿ 2011.**

4. ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರ, ಕರ್ನಾಟಕ ಪಶುವೈದ್ಯಕೀಯ, ಪಶು ಹಾಗೂ ಮೀನುಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬಿದರ್ ಬಿ.ವಿ.ಎಸ್ಸಿ &ಎ.ಹೆಚ್. ಸ್ನಾತಕ ಪದವಿ ಕೋರ್ಸಿನ ಅಂತಿಮ ವರ್ಷದ ವಿದ್ಯಾರ್ಥಿಗಳಿಗೆ ಇಂಟರ್ನ್‌ಷಿಪ್ ಮಾಸಿಕ ಭತ್ಯೆಯನ್ನು ಪ್ರಸ್ತುತ ರೂ. 5,000/– ದಿಂದ ರೂ. 11,000/– (ರೂಪಾಯಿ ಹನ್ನೊಂದು ಸಾವಿರ ಮಾತ್ರ) ಕ್ಕೆ ಹೆಚ್ಚಿಸಲು ಮಂಜೂರಾತಿ ನೀಡಲಾಗಿದೆ.

5. ಇಂಟರ್ನ್‌ಷಿಪ್ ಮಾಸಿಕ ಭತ್ಯೆಯ ಹೆಚ್ಚಳದಿಂದ ಉಂಟಾಗುವ ಹೆಚ್ಚುವರಿ ವೆಚ್ಚವನ್ನು ಕರ್ನಾಟಕ ಪಶವೈದ್ಯಕೀಯ, ಪಶು ಹಾಗೂ ಮೀನುಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ ತನ್ನ ಆಂತರಿಕ ಮೂಲದಿಂದ ಭರಿಸತಕ್ಕದ್ದು ಹಾಗೂ ಈ ಸಂಬಂಧ ಸರ್ಕಾರದಿಂದ ಹೆಚ್ಚುವರಿ ಅನುದಾನ ನೀಡಲಾಗುವುದಿಲ್ಲ.

6. ಈ ಆದೇಶವನ್ನು ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ : ಆಇ 598 ವೆ4/2011, ದಿನಾಂಕ : 12–01–2012 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ಕೆ. ಶ್ರೀನಿವಾಸಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ.
(ಪಶುಸಂಗೋಪನೆ).

ಪಿ.ಆರ್.426

## HEALTH AND FAMILY WELFARE SECRETARIAT

**Sub :** Awarding Contract to carry out the impact Evaluation of OD Scale-up Activities-reg.

**Read :** World Bank e-mail dt. 26-4-2011.

**Preamble:**

The World Bank assisted Karnataka health System Development and Reform Project is implemented to strengthen primary Healthcare services in Karnataka. It is felt that there is an urgent need for improvement in the quality of service in the health care delivery system in the State at all levels.

The main gaps identified at the personnel level are

a) Commitment towards service
b) Sensitiveness in dealing with the patients and their relatives.
c) Motivation
d) Service orientation
e) Managerial capacity
f) Time, people and conflict management.
g) Team spirit.

An Expression of Interest (EoI) was invited for conducting an impact Evaluation (OD Scale-up Activities) of the Programme 'Managerial Capacity Building and Attitudinal Change workshops' Category-2, 3 and 4. The same was published in the Kannada Prabha and Deccan Herald on 23-05-2011. In response to the EOI, 7 proposals were received from various firms. And these proposals are evaluated by the Evaluation Committee. The qualified firm was issued on RFP.

The RFP submitted by Administrative Staff College of India, Hyderabad was evaluated by the committee. This firm was found qualified to carryout the Impact Evaluation (OD Scale-Up Activities) of the Programme 'Managerial Capacity Building and Attitudinal Change workshops' Category-2, 3 and 4.

Negotiations were held and after the negotiations the firm has agreed to conduct the Impact evaluation (OD Scale-Up Activities) of the Programme 'Managerial Capacity Building and Attitudinal Change workshops' Category-2, 3 and 4, at the cost of Rs. 23,56,410-00 plus service tax as applicable.

The Secretary, Health and Family Welfare Department and Chairman, Programmed Steering Committee has approved the proposal, subject to ratification of the PSC for award of contract to Administrative Staff College of India, Hyderabad to carry out the impact Evaluation (OD Scale-Up Activities) of the Programme 'Managerial Capacity Building and Attitudinal Change workshops' Category-2, 3 and 4.

The World Bank has also given No objection for TOR vide e-mail read at above.

Hence, the following Order.

**Government Order No. HFW/KHSDRP/OD/Impact Asst/02/11-12, Bangalore, Dated: 6th January 2012.**

Under the circumstances mentioned in the preamble, Government are pleased to approve the award of contract to Administrative Staff College of India, Hyderabad to carry out the impact Evaluation (OD Scale-Up Activities) of the Programme 'Managerial Capacity Building and Attitudinal Change workshops' Category-2, 3 and 4, for a total negotiated cost of Rs. 23,56,410-00 (Rupees twentythree lakhs fiftysix thousand four huyndred and ten only) plus service tax as applicable.

The consultancy firm shall enter into an Ageement with the Project accordingly.

By Order and in the name of the Governor of Karnataka,

**K.N. Ramesh**

Deputy Secretary to Government (I/c)

KHSDRP

Health and Family Welfare Department

PR.427

## ಒಳಾಡಳಿತ ಸಚಿವಾಲಯ

**ವಿಷಯ :** ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಒಂದು ಆಡಳಿತಾಧಿಕಾರಿಯ ಮತ್ತು ಒಂದು ಲೆಕ್ಕಪತ್ರ ಅಧೀಕ್ಷಕರು-1 ಇವರ ತಾತ್ಕಾಲಿಕ ಹುದ್ದೆಗಳನ್ನು ಖಾಯಂಗೊಳಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ: ಲಾ 130 ಎಲ್ಎಜಿ 79, ದಿನಾಂಕ: 07-10-1980.
2. ಸರ್ಕಾರದ ಆದೇಶ ಸಂಖ್ಯೆ: ಒಇ 168 ಪಿಪಿಇ 2005, ದಿನಾಂಕ: 18-10-2005
3. ಸರ್ಕಾರದ ತಿದ್ದುಪಡಿ ಆದೇಶ ಸಂಖ್ಯೆ: ಒಇ 29 ಪಿಪಿಇ 2006, ದಿನಾಂಕ: 24-06-2006
4. ಸರ್ಕಾರದ ಆದೇಶ ಸಂಖ್ಯೆ: ಒಇ 428 ಪಿಪಿಇ 2010, ದಿನಾಂಕ: 13-07-2011.
5. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರದ ಸಂಖ್ಯೆ: ಡಿಪಿಎನ್/ಕೇಂಸ/ವಿವ/29/2011-12, ದಿನಾಂಕ: 07-07-2011.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ: 07-10-1980 ರ ಸರ್ಕಾರದ ಆದೇಶದನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ನಿರ್ದೇಶಕರ ಕಛೇರಿಗೆ ಒಂದು ಆಡಳಿತಾಧಿಕಾರಿಯ ಹುದ್ದೆಯನ್ನು ತಾತ್ಕಾಲಿಕವಾಗಿ ಒಂದು ವರ್ಷದ ಅವಧಿಗೆ ಸೃಜಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ದಿನಾಂಕ: 18-10-2005ರ ಸರ್ಕಾರದ ಆದೇಶದನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ನಿರ್ದೇಶಕರ ಕಛೇರಿಗೆ ಒಂದು ಲೆಕ್ಕಪತ್ರ ಅಧೀಕ್ಷಕರ ಹುದ್ದೆ (ವೇತನ ಶ್ರೇಣಿ: ರೂ. 5200-9580)ಯನ್ನು ತಾತ್ಕಾಲಿಕವಾಗಿ ಎರಡು ವರ್ಷಗಳ ಅವಧಿಗೆ ಸೃಜಿಸಲಾಗಿದ್ದು, ಮೇಲೆ (3)ರಲ್ಲಿ ಓದಲಾದ ದಿನಾಂಕ: 24-06-2006ರ ತಿದ್ದುಪಡಿ ಆದೇಶದನ್ವಯ ಲೆಕ್ಕಪತ್ರ ಅಧೀಕ್ಷಕರ ಹುದ್ದೆ-1 (ವೇತನ ಶ್ರೇಣಿ ರೂ. 5575-10620) ಎಂದು ತಿದ್ದುಪಡಿ ಮಾಡಲಾಗಿದೆ.

ಮೇಲೆ (4)ರಲ್ಲಿ ಓದಲಾದ ದಿನಾಂಕ: 13-07-2011ರ ಸರ್ಕಾರದ ಆದೇಶದನ್ವಯ ಮೇಲೆ (1), (2) ಮತ್ತು (3)ರಲ್ಲಿ ಓದಲಾದ ಸರ್ಕಾರಿ ಆದೇಶಗಳನ್ವಯ ಸೃಜಿಸಿ, ತಿದ್ದುಪಡಿ ಮಾಡಿ ಕಾಲ-ಕಾಲಕ್ಕೆ ಮುಂದುವರಿಸಿಕೊಂಡು ಬಂದಿರುವ ಒಂದು ಆಡಳಿತಾಧಿಕಾರಿಯ ಮತ್ತು ಒಂದು ಲೆಕ್ಕಪತ್ರ ಅಧೀಕ್ಷಕರು-1 ತಾತ್ಕಾಲಿಕ ಹುದ್ದೆಯನ್ನು ದಿನಾಂಕ: 31-03-2012ರ ವರೆಗೆ ಮುಂದುವರೆಸಲಾಗಿದೆ.

ಮೇಲೆ (5)ರಲ್ಲಿ ಓದಲಾದ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರ ದಿನಾಂಕ: 07-07-2011ರ ಪತ್ರದಲ್ಲಿ ಇಲಾಖೆಯಲ್ಲಿನ ಒಂದು ಆಡಳಿತಾಧಿಕಾರಿಯ ಮತ್ತು ಒಂದು ಲೆಕ್ಕಪತ್ರ ಅಧೀಕ್ಷಕರು-1 ಮೇಲೆ (1), (2) ಮತ್ತು (3)ರಲ್ಲಿ ಓದಲಾದ ಸರ್ಕಾರಿ ಆದೇಶಗಳನ್ವಯ ಸೃಜಿಸಿ, ಕಾಲ-ಕಾಲಕ್ಕೆ ಮುಂದುವರಿಸಿಕೊಂಡು ಬಂದು ಮೇಲೆ (4)ರಲ್ಲಿ ಓದಲಾದ ಸರ್ಕಾರದ ಆದೇಶದನ್ವಯ ದಿನಾಂಕ: 31-03-2012ರ ವರೆಗೆ ಮುಂದುವರೆಸಲಾಗಿರುವ ಸದರಿ ತಾತ್ಕಾಲಿಕ ಹುದ್ದೆಗಳು ದೈನಂದಿನ ಆಡಳಿತಾತ್ಮಕ ಕಾರ್ಯದ ದೃಷ್ಟಿಯಿಂದ ಅತಿ ಅವಶ್ಯಕ ಹುದ್ದೆಗಳಾಗಿದ್ದು, ಇವುಗಳನ್ನು ಇಲಾಖೆಯ ಹಿತದೃಷ್ಟಿಯಿಂದ ಖಾಯಂಗೊಳಿಸುವುದು ಅವಶ್ಯಕವಾಗಿದೆ. ಆದ್ದರಿಂದ, ಸದರಿ ಒಂದು ಆಡಳಿತಾಧಿಕಾರಿಯ ಮತ್ತು ಒಂದು ಲೆಕ್ಕಪತ್ರ ಅಧೀಕ್ಷಕರು-1 ತಾತ್ಕಾಲಿಕ ಹುದ್ದೆಗಳನ್ನು ಖಾಯಂಗೊಳಿಸಿ ಆದೇಶ ಹೊರಡಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 300 ಪಿಪಿಇ 2011, ಬೆಂಗಳೂರು, ದಿನಾಂಕ: 20ನೇ ಜನವರಿ 2012**

ಮೇಲಿನ ವಿವರಗಳ ಹಿನ್ನೆಲೆಯಲ್ಲಿ, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರ ಕಛೇರಿಗೆ ಹೊಂದಿಕೊಂಡಂತೆ ಈ ಮುಂದಿನ ತಃಖ್ತೆಯ ಅಂಕಣ (3)ರಲ್ಲಿನ ಸರ್ಕಾರಿ ಆದೇಶಗಳನ್ವಯ ಸೃಜನೆಯಾದ ಅಂಕಣ (2)ರಲ್ಲಿನ ತಾತ್ಕಾಲಿಕ ಹುದ್ದೆಗಳನ್ನು ಖಾಯಂ ಹುದ್ದೆಗಳೆಂದು ಘೋಷಿಸಿದೆ.

| ಕ್ರ.ಸಂ. | ಹುದ್ದೆಯ ಹೆಸರು | ಹುದ್ದೆಯು ಸೃಜನೆಯಾದ ಆದೇಶ ಸಂಖ್ಯೆ ಮತ್ತು ದಿನಾಂಕ |
|---|---|---|
| (1) | (2) | (3) |
| 1 | ಆಡಳಿತಾಧಿಕಾರಿ | ಲಾ 130 ಎಲ್ಎಜಿ 79, ದಿನಾಂಕ: 07-10-1980 |
| 2 | ಲೆಕ್ಕಪತ್ರ ಅಧೀಕ್ಷಕರು-1 | ಒಇ 168 ಪಿಪಿಇ 2005, ದಿನಾಂಕ: 18-10-2005,<br>ತಿದ್ದುಪಡಿ ಆದೇಶ ಸಂಖ್ಯೆ: ಒಇ 29 ಪಿಪಿಇ 2006, ದಿನಾಂಕ: 24-06-2006 |

ಸದರಿ ಹುದ್ದೆಗಳಿಗೆ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ '2014 ನ್ಯಾಯಪರಿಪಾಲನೆ –00–114–ಕಾನೂನು ಸಲಹೆಗಾರರು ಮತ್ತು ಸಮೂಪದೇಶಕರು–0–02 ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು' ಇದರಡಿ ಭರಿಸತಕ್ಕದ್ದು.

ಸದರಿ ಆದೇಶವನ್ನು ಸರ್ಕಾರದ ಆದೇಶ ಸಂ: ಎಫ್‌ಡಿ 58 ಎಸ್‌ಆರ್‌ಎಸ್ 79, ದಿನಾಂಕ: 27–09–1979ರ ಕಂಡಿಕೆ 2(iii) ರನ್ವಯ ಹೊರಡಿಸಿದೆ.

**ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,**
**ಹೆಚ್.ಕೆ. ನಿಂಗಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ
(ಪೊಲೀಸ್ ಸೇವೆಗಳು–ಬಿ)

ಪಿ.ಆರ್. ನಂ. 428

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ವಿ.ಎಸ್. ಶಾನ್‌ವಾಡ್ ನಿವೃತ್ತ ಡಿವೈ.ಎಸ್.ಪಿ. ರವರ ವಿರುದ್ಧ ಶಿಸ್ತಿನ ಕ್ರಮ ಜರುಗಿಸುವ ಬಗ್ಗೆ.

**ಓದಲಾಗಿದೆ :**
1. ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ: ಸಿಬಿ(5)/43/08–09, ದಿನಾಂಕ: 08–04–2009.
2. ಸರ್ಕಾರದ ಆದೇಶ ಸಂಖ್ಯೆ: ಒಇ 445 ಪೊಸಿಪ 2008 ದಿನಾಂಕ: 14–02–2011.
3. ವಿಚಾರಣಾಧಿಕಾರಿಗಳು: ಪೊಲೀಸ್ ಅಧೀಕ್ಷಕರು, ರಾಜ್ಯ ಗುಪ್ತವಾರ್ತೆ, ಬೆಳಗಾಂ ರವರ ಪತ್ರ ಸಂಖ್ಯೆ: ಬೆಳಗಾವಿ/ಗುವಾ/ಇ.ವಿ/614/2011 ದಿನಾಂಕ: 17–12–2011.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಶ್ರೀ ವಿ.ಎಸ್. ಶಾನ್‌ವಾಡ್ ನಿವೃತ್ತ ಡಿವೈ.ಎಸ್.ಪಿ. ರವರ ಈ ಹಿಂದೆ ಐ.ಜಿ.ಪಿ. ಕಛೇರಿ ಉತ್ತರ ವಲಯ, ಬೆಳಗಾಂನಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಜೆ.ಎಂ.ಎಫ್.ಸಿ. ಹುಕ್ಕೇರಿ ನ್ಯಾಯಾಲಯವು ಸಿ.ಸಿ. ಸಂಖ್ಯೆ: 501/99ರಲ್ಲಿ ದಿನಾಂಕ: 07–11–2000 ರಂದು ನೀಡಿದ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸುವ ಬಗ್ಗೆ 343 ದಿನಗಳು ವಿಳಂಬ ಮಾಡಿರುವ ಆರೋಪದ ಮೇರೆಗೆ ಮಾನ್ಯ ಉಚ್ಛ ನ್ಯಾಯಾಲಯ, ಧಾರವಾಡ ರವರು ದಿನಾಂಕ: 14–07–2008 ರಂದು ನೀಡಿರುವ ತೀರ್ಪಿನ ಹಿನ್ನೆಲೆಯಲ್ಲಿ ಅಧಿಕಾರಿಗಳು ಎಸಗಿರುವ ಆರೋಪಗಳು ಮೇಲ್ನೋಟಕ್ಕೆ ಸಾಭೀತಾಗಿರುವುದರಿಂದ ಶಿಸ್ತು ಕ್ರಮಕೈಗೊಳ್ಳಲು ಕೆ.ಸಿ.ಎಸ್.ಆರ್. ನಿಯಮ 213 ಮತ್ತು 214 ನ್ನು ಓದಿಕೊಂಡಂತೆ ಕೆ.ಎಸ್.ಪಿ. (ಡಿ.ಪಿ) ನಿಯಮಗಳು, 1965ರ ನಿಯಮ 6 ರಡಿಯಲ್ಲಿ ಇಲಾಖೆ ವಿಚಾರಣೆಗೆ ಆದೇಶಿಸಿ ಪ್ರಕರಣವನ್ನು ಪೊಲೀಸ್ ಅಧೀಕ್ಷಕರು, ರಾಜ್ಯ ಗುಪ್ತವಾರ್ತೆ, ಬೆಳಗಾವಿ ರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲು ಮತ್ತು ದೋಷಾರೋಪಣಾ ಪಟ್ಟಿಯನ್ನು ಜಾರಿಗೊಳಿಸಲು ಪೊಲೀಸ್ ಮಹಾ ನಿರ್ದೇಶಕರು ರವರು ಕೋರಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 213 ಮತ್ತು 214 ಸೇರಿಸಿಕೊಂಡು ಓದಿಕೊಂಡಂತೆ ಶ್ರೀ ವಿ.ಎಸ್. ಶಾನ್‌ವಾಡ್, ಡಿವೈ.ಎಸ್.ಪಿ (ನಿವೃತ್ತ) ರವರು ತಮ್ಮ ಕರ್ತವ್ಯದಲ್ಲಿ ನಿರ್ಲಕ್ಷ್ಯವಹಿಸಿರುವ ಬಗ್ಗೆ ಇಲಾಖಾ ಶಿಸ್ತು ಕ್ರಮ ಜರುಗಿಸಲು ಅವಕಾಶವಿರುವುದರಿಂದ ಶ್ರೀ ವಿ.ಎಸ್. ಶಾನ್‌ವಾಡ್ ನಿವೃತ್ತ ಡಿವೈ.ಎಸ್.ಪಿ. ರವರ ವಿರುದ್ಧ ಕೆ.ಸಿ.ಎಸ್.ಆರ್. ನಿಯಮ 213 ಮತ್ತು 214ನ್ನು ಓದಿಕೊಂಡಂತೆ ಕೆ.ಎಸ್.ಪಿ (ಡಿ.ಪಿ) ನಿಯಮಗಳು, 1965ರ ನಿಯಮ 6ರಲ್ಲಿ ಇಲಾಖಾ ವಿಚಾರಣೆಗೆ ಆದೇಶಿಸಿ ಪ್ರಕರಣದಲ್ಲಿ ಎಸ್.ಪಿ. ಗುಪ್ತವಾರ್ತೆ, ಬೆಳಗಾಂ ರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಲಾಗಿತ್ತು.

ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ವಿಚಾರಣಾಧಿಕಾರಿ ಹಾಗೂ ಎಸ್.ಪಿ. ರಾಜ್ಯ ಗುಪ್ತವಾರ್ತೆ, ಬೆಳಗಾಂ ಇವರು ತಮ್ಮ ದಿನಾಂಕ: 17–12–2011ರ ಪ್ರಸ್ತಾವನೆಯಲ್ಲಿ ಆರೋಪಿತ ಅಧಿಕಾರಿ ಶ್ರೀ ವಿ.ಎಸ್. ಶಾನ್‌ವಾಡ್ ನಿವೃತ್ತ ಡಿವೈ.ಎಸ್.ಪಿ. ರವರು ದಿನಾಂಕ: 04–12–2011 ರಂದು ಮೃತಪಟ್ಟಿರುವುದಾಗಿ ವರದಿ ಮಾಡಿ, ಮರಣ ಪ್ರಮಾಣ ಪತ್ರವನ್ನು ಲಗತ್ತಿಸಿರುತ್ತಾರೆ.

ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ 10 ಸೇಇವಿ 03 ದಿನಾಂಕ: 12–11–2003 ರಲ್ಲಿ ಇಲಾಖಾ ವಿಚಾರಣೆ ನಡೆಯುತ್ತಿದ್ದಾಗ, ಸರ್ಕಾರಿ ನೌಕರನು ಮೃತನಾದರೆ, ಅಂತಹ ಸರ್ಕಾರಿ ನೌಕರರಿಂದ ಆರ್ಥಿಕ ನಷ್ಟ ಉಂಟಾಗಿದ್ದರೆ ತೆಗೆದುಕೊಳ್ಳಬಹುದಾದ ಕ್ರಮವನ್ನು ವಿವರಿಸಲಾಗಿದೆ. ಈ ಪ್ರಕರಣದಲ್ಲಿ ನ್ಯಾಯಾಲಯದ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸಲು ಆಗಿರುವ ತೀವ್ರ ವಿಳಂಬದ ಬಗ್ಗೆ ಉಚ್ಛ ನ್ಯಾಯಾಲಯವು ಆದೇಶಿಸಿದಂತೆ ನಿವೃತ್ತ ಅಧಿಕಾರಿಯ ವಿರುದ್ಧ ಶಿಸ್ತು ಕ್ರಮಕೈಗೊಳ್ಳಲು ಉದ್ದೇಶಿಸಲಾಗಿತ್ತು. ಈ ಪ್ರಕರಣದಲ್ಲಿ ಮೇಲ್ಮನವಿ ಸಲ್ಲಿಸಲು ವಿಳಂಬವಾಗಿದೆಯೇ ವಿನಹ ಯಾವುದೇ ಆರ್ಥಿಕ ನಷ್ಟ ಸರ್ಕಾರಕ್ಕೆ ಉಂಟುಮಾಡಿರುವ ಬಗ್ಗೆ ಪ್ರಸ್ತಾಪವಿರುವುದಿಲ್ಲ. ಆದುದರಿಂದ ಮೃತ ಪಟ್ಟ ಅಧಿಕಾರಿಯ (ನಿವೃತ್ತ ನೌಕರರ) ವಿರುದ್ಧದ ಇಲಾಖಾ ವಿಚಾರಣೆಯನ್ನು ಕೈಬಿಡಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 445 ಪೊಸಿಪ 2008 ಬೆಂಗಳೂರು, ದಿನಾಂಕ: 20–01–2012**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ ಶ್ರೀ ವಿ.ಎಸ್. ಶಾನ್‌ವಾಡ್ (ನಿ) ಡಿ.ವೈ.ಎಸ್.ಪಿ. ರವರು ದಿನಾಂಕ: 04–12–2011 ರಂದು ಮೃತಪಟ್ಟಿರುವುದರಿಂದ ಹಾಗೂ ಪ್ರಸ್ತಾಪಿತ ಪ್ರಕರಣದಲ್ಲಿ ಅಧಿಕಾರಿಗಳಿಂದ ಸರ್ಕಾರಕ್ಕೆ ಆರ್ಥಿಕ ನಷ್ಟ ಆಗಿಲ್ಲದಿರುವುದರಿಂದ ಮೃತ ಅಧಿಕಾರಿಗಳ ವಿರುದ್ಧ ಇಲಾಖಾ ವಿಚಾರಣೆಯನ್ನು ಕೈಬಿಡಲಾಗಿದೆ.

**ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,**
**ಹೆಚ್.ಕೆ. ನಿಂಗಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. ನಂ. 429

## ಶಿಕ್ಷಣ ಸಚಿವಾಲಯ

**ವಿಷಯ :** ಸರ್ಕಾರಿ ಜಿಲ್ಲಾ ಮುದ್ರಣಾಲಯ, ತುಮಕೂರು ಹಾಗೂ ಸರ್ಕಾರಿ ವಿಭಾಗೀಯ ಮುದ್ರಣಾಲಯ ಗುಲ್ಬರ್ಗಾ, ಇಲ್ಲಿನ ಯಂತ್ರಗಳನ್ನು ಸ್ಥಳಾಂತರಿಸಲು ವೆಚ್ಚ ಭರಿಸುವ ಬಗ್ಗೆ.

**ಓದಲಾಗಿದೆ :**

**1.** ದಿನಾಂಕ: 11–05–2010 ರ ಸರ್ಕಾರದ ಆದೇಶ ಸಂಖ್ಯೆ: 569 ಇಎಸ್‌ಡಬ್ಲ್ಯೂ 2009.

**2.** ದಿನಾಂಕ: 30–10–2010ರ ಸರ್ಕಾರದ ಪತ್ರ ಸಂಖ್ಯೆ: ಇಡಿ 569 ಇಎಸ್‌ಡಬ್ಲ್ಯೂ 2009.

**3.** ದಿನಾಂಕ: 23–08–2011 ರ ಸರ್ಕಾರಿ ಮುದ್ರಣ ಇಲಾಖೆಯ ನಿರ್ದೇಶಕರ ಪತ್ರ ಸಂಖ್ಯೆ: ಡಿಪಿಎಸ್/ಯೋಜನಾ–44/1578/2011–12.

**ಪ್ರಸ್ತಾವನೆ:**

1. ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ತುಮಕೂರು ಸರ್ಕಾರಿ ಮುದ್ರಣಾಲಯವನ್ನು ಶಾಶ್ವತವಾಗಿ ಮುಚ್ಚಿ ಸದರಿ ಮುದ್ರಣಾಲಯದಲ್ಲಿರುವ ಯಂತ್ರೋಪಕರಣಗಳನ್ನು ಮೈಸೂರು ಮುದ್ರಣಾಲಯಕ್ಕೆ ಸ್ಥಳಾಂತರಿಸುವಂತೆ ಆದೇಶಿಸಿಲಾಗಿರುತ್ತದೆ.

2. ಮೇಲೆ (2) ರಲ್ಲಿ ಓದಲಾದ ಸರ್ಕಾರದ ಪತ್ರದಲ್ಲಿ ತುಮಕೂರು ಜಿಲ್ಲಾ ಮುದ್ರಣಾಲಯದಲ್ಲಿರುವ ಕೆಲವೊಂದು ಯಂತ್ರಗಳನ್ನು ಕೇಂದ್ರ ಮುದ್ರಣಾಲಯದ ಪೀಣ್ಯದ ಕಟ್ಟಡಕ್ಕೆ ಸ್ಥಳಾಂತರಿಸಿ ಅಲ್ಲಿ ಒಂದು ಭದ್ರತಾ ಮುದ್ರಣಾಲಯವನ್ನು ಸ್ಥಾಪಿಸಲು ಅನುಮತಿಸಲಾಗಿರುತ್ತದೆ.

3. ಮೇಲೆ (3) ರಲ್ಲಿ ಓದಲಾದ ನಿರ್ದೇಶಕರ ಪ್ರಸ್ತಾವನೆಯಲ್ಲಿ ದಿನಾಂಕ: 11–05–2010 ರ ಸರ್ಕಾರದ ಆದೇಶ ಸಂಖ್ಯೆ: ಇಡಿ 569 ಇಎಸ್‌ಡ್ಲ್ಯೂ 2009, ಹಾಗೂ ದಿನಾಂಕ: 30–10–2010 ರ ಪತ್ರದನ್ವಯ ತುಮಕೂರು ಮುದ್ರಣಾಲಯದಲ್ಲಿನ ಯಂತ್ರಗಳನ್ನು ಹಾಗೂ ಗುಲ್ಬರ್ಗಾ ವಿಭಾಗೀಯ ಮುದ್ರಣಾಲಯದ ಯಂತ್ರಗಳನ್ನು ಸ್ಥಳಾಂತರಿಸಲು ತಗಲುವ ಅಂದಾಜು ವೆಚ್ಚ ರೂ. 20 ಲಕ್ಷಗಳನ್ನು ಭರಿಸಲು ಇಲಾಖೆಯಲ್ಲಿನ ಲೆಕ್ಕ ಶೀರ್ಷಿಕೆ 2058–00–103–0–01–071 (ಕಟ್ಟಡ ವೆಚ್ಚಗಳು) ಇದರಡಿ ಉಳಿಕೆ ಇರುವ ರೂ. 53,73 ಲಕ್ಷಗಳ ಅನುದಾನದ ಮಿತಿಯಲ್ಲಿ ಭರಿಸಲು ಅನುಮತಿಸುವಂತೆ ಕೋರಿರುತ್ತಾರೆ.

4. ಸರ್ಕಾರಿ ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆಯ ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 165 ಇಎಸ್‌ಡ್ಲ್ಯೂ 2011 ಬೆಂಗಳೂರು, ದಿನಾಂಕ: 18–01–2012**

5. ಸರ್ಕಾರಿ ಜಿಲ್ಲಾ ಮುದ್ರಣಾಲಯ, ತುಮಕೂರು ಹಾಗೂ ಗುಲ್ಬರ್ಗಾ ಇಲ್ಲಿನ ಯಂತ್ರೋಪಕರಣಗಳನ್ನು ಅನುಬಂಧಗಳಲ್ಲಿ ಸೂಚಿಸಿದಂತೆ ಕರ್ನಾಟಕ ಪಾರದರ್ಶಕ ಅಧಿನಿಯಮದಡಿಯಲ್ಲಿ ಮುಕ್ತ ಟೆಂಡರ್ ಕರೆದು ಇಲಾಖೆಯ ಲೆಕ್ಕ ಶೀರ್ಷಿಕೆ 2058–00–103–0–01–071 (ಕಟ್ಟಡ ವೆಚ್ಚಗಳು) ಅಡಿಯಲ್ಲಿ ಉಳಿದಿರುವ ಅನುದಾನದಿಂದ ರೂ. 20.00 (ಇಪ್ಪತ್ತು ಲಕ್ಷ ರೂಪಾಯಿಗಳು) ಲಕ್ಷಕ್ಕೆ ಸೀಮಿತಗೊಳಿಸಿ ವೆಚ್ಚವನ್ನು ಭರಿಸಿ ಯಂತ್ರಗಳನ್ನು ಸ್ಥಳಾಂತರಿಸಲು ಅನುಮತಿಸಿ ಆದೇಶಿಸಿದೆ.

6. ಈ ಆದೇಶವನ್ನು ದಿನಾಂಕ: 26–09–2011 ರ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಸಿಇ 787 ಐಎಫ್‌ಎಸ್ 2011 ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಬಿ. ಪಟಗಾರ್**
ಸರ್ಕಾರದ ಅಧೀನ ಕಾರ್ಯದರ್ಶಿ (ಸಾಮಾನ್ಯ)
ಶಿಕ್ಷಣ ಇಲಾಖೆ

## ಅನುಬಂಧ – 1

**Shifting of Machinery from Government District Press**
**Tumkur to Government Text Book Press, Mysore**

| Sl. No. | Description | No. of M/c's |
|---|---|---|
| 1 | Ajit Web Offset Machine Single Colour | 1 |
| 2 | Print wel 4 Colour Web Offset Machine | 1 |
| 3 | HMT A2 Sheet Fed double colour Machine | 2 |
| 4 | HMT Programme Cutting Machine | 1 |
| 5 | Six Clamp Wellbound Machine (Cutting M/C) | 1 |
| 6 | Trident Three Knife Trimmer | 2 |
| 7 | Print Tool Three Size Cutting Machine | 1 |
| 8 | Harbajan Wire Stitching Machine | 2 |

## ಅನುಬಂಧ – 2

**Shifting of Machinery from Government District Press**
**Tumkur to Security Press, Peenya, Bangalore**

| Sl. No. | Description | No. of M/c's |
|---|---|---|
| 1 | Ajit Web Offset Machine Single Colour | 1 |
| 2 | Print Wel 2 Colour Web Offset Machine | 1 |
| 3 | HMT A2 Sheet Fed double colour Machine | 1 |
| 4 | HMT A1 Sheet Fed double colour Machine | 1 |

| | | |
|---|---|---|
| 5 | Park-92 Programmable paper Cutting Machine-1 | 2 |
| 6 | Harbajan Wire Stiching Machine | 3 |
| 7 | Paste up table | 2 |
| 8 | Plate Exposure | 2 |
| 9 | Plate Processor | 1 |
| 10 | Computer | 1 |
| 11 | 3 KVA UPS System | 1 |
| 12 | Xerox Copier | 1 |
| 13 | Electronic Weighing Machine | 1 |

**ಅನುಬಂಧ – 3**

**Shifting of Machinery from Gulbarga from one unit of the Government Press to another unit**

| Sl. No. | Description | No. of M/c's |
|---|---|---|
| 1 | Web Offset Machine, Ashoka 900, A-1 size | 1 |
| 2 | Original perfecta cutting machine | 1 |
| 3 | Printing down frame | 1 |
| 4 | Wire stitching machines | 2 |

**ಎಸ್.ಬಿ. ಪಟಗಾರ್**

ಪಿ.ಆರ್. 430

ಸರ್ಕಾರದ ಅಧೀನ ಕಾರ್ಯದರ್ಶಿ (ಸಾಮಾನ್ಯ)

ಶಿಕ್ಷಣ ಇಲಾಖೆ

## ಶಿಕ್ಷಣ ಸಚಿವಾಲಯ

**ತಿದ್ದುಪಡಿ ಆದೇಶ**

**ಸಂಖ್ಯೆ: ಇಡಿ 180 ಎಸ್ಒಹೆಚ್ 2010 ಬೆಂಗಳೂರು, ದಿನಾಂಕ: 12–01–2012**

ಸರ್ಕಾರದ ಅಧಿಸೂಚನೆ ಸಂಖ್ಯೆ: ಇಡಿ 180 ಎಸ್ಒಹೆಚ್ 2010. ದಿನಾಂಕ: 15–06–2011ರ ಅನುಬಂಧ–1 ರಲ್ಲಿನ ಕ್ರಮ ಸಂಖ್ಯೆ: 1778 ರಲ್ಲಿರುವ 'ಮೊಹಮ್ಮದ್ ಮ್ಯಸೂದ್ ಅಹ್ಮದ್" ಎಂಬುದರ ಬದಲಿಗೆ 'ಎಂ.ಡಿ. ಮಕ್ಸೂದ್ ಅಹ್ಮದ್" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

**ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,**

**ಹೆಚ್.ಟಿ. ಜಯರಾಂ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. ನಂ. 431

ಶಿಕ್ಷಣ ಇಲಾಖೆ (ಪ್ರೌಢ ಶಿಕ್ಷಣ)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ಸೇರ್ಪಡೆ**

**ಸಂಖ್ಯೆ: ಆಕುಕ 47 ಪಿಟಿಡಿ 2011 ಬೆಂಗಳೂರು, ದಿನಾಂಕ: 17–01–2012**

ಸರ್ಕಾರದ ಆದೇಶ ಸಂಖ್ಯೆ: ಆಕುಕ 47 ಪಿಟಿಡಿ 2011, ದಿನಾಂಕ: 23–09–2011ರ ಆದೇಶ ಭಾಗದ ಷರತ್ತುಗಳ ಕ್ರಮ ಸಂಖ್ಯೆ: 1 ಹಾಗೂ 7ಕ್ಕೆ ಸಂಬಂಧಿಸಿದಂತೆ ಈ ಕೆಳಕಂಡಂತೆ ಸೇರ್ಪಡೆ ಮಾಡಿದೆ.

ಕ್ರಮ ಸಂಖ್ಯೆ: 1 : ಪ್ರಕೃತಿ ಚಿಕಿತ್ಸೆ ಮತ್ತು ಯೋಗದಲ್ಲಿ ಈವರೆವಿಗೂ ಸ್ನಾತಕೋತ್ತರ ಪದವಿ ಕೋರ್ಸ್‌ಗಳು ಪ್ರಾರಂಭವಾಗಿಲ್ಲದೆ ಇರುವುದರಿಂದ ಈ ವರ್ಷದ ಮಟ್ಟಿಗೆ ಸರ್ಕಾರಿ ಪ್ರಕೃತಿ ಚಿಕಿತ್ಸೆ ಮತ್ತು ಯೋಗ ಮಹಾ ವಿದ್ಯಾಲಯ, ಮೈಸೂರು, ಇಲ್ಲಿ BNYS ಪದವಿ ಪಡೆದವರನ್ನು ಅತಿಥಿ ಉಪನ್ಯಾಸಕರಾಗಿ ನೇಮಕ ಮಾಡಿಕೊಳ್ಳತಕ್ಕದ್ದು.

ಕ್ರಮ ಸಂಖ್ಯೆ: 7 : ಸಕ್ಷಮ ಪ್ರಾಧಿಕಾರಿಯಾಗಿ "ಆಯುಷ್ ನಿರ್ದೇಶಕರು" ಕಾರ್ಯ ನಿರ್ವಹಿಸತಕ್ಕದ್ದು ಎಂದು ಸೇರಿಸಿಕೊಳ್ಳತಕ್ಕದ್ದು.

ಉಳಿದ ಷರತ್ತುಗಳಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

**ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,**

**ಕೆ.ಎನ್. ಹರಿಣಿಯಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. ನಂ. 432

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

(ಭಾರತೀಯ ವೈದ್ಯ ಪದ್ಧತಿ)

## HEALTH AND FAMILY WELFARE SECRETARIAT

**CORRIGENDUM**

**No.HFW/KHSDRP/MS Office & NA/26/10-11, Bangalore Dated: 20-01-2012**

In the Government Order No: HFW/KHSDRP/MS Office & NA/26/10-11, dt: 31.12.2011, in the order portion at 3rd line instead of **"Rs. 1,09,40,248/-** it shall be read as **Rs. 1,09,40,248/- excluding taxes.**

By Order and in the name of the Governor of Karnataka,

**K.N. Ramesh**

Deputy Secretary to Government (I/c)

KHSDRP

Health and Family Welfare Department

PR. 433

## ಶಿಕ್ಷಣ ಸಚಿವಾಲಯ

**ವಿಷಯ :** ಸರ್ಕಾರಿ ಕೇಂದ್ರ ಮುದ್ರಣಾಲಯ, ಸರ್ಕಾರಿ ಮುದ್ರಣಾಲಯ, ಪೀಣ್ಯ ಶೆಡ್ ಮತ್ತು ಸರ್ಕಾರಿ ಹೊರವಲಯ ಮುದ್ರಣಾಲಯಗಳಲ್ಲಿ ಮಂಜೂರಾದ ಹುದ್ದೆಗಳನ್ನು ಅಪೆಂಡಿಕ್ಸ್–'ಬಿ' ನಲ್ಲಿ ಒಗ್ಗೂಡಿಸುವ ಬಗ್ಗೆ ಸರ್ಕಾರದ ಮಂಜೂರಾತಿ ಆದೇಶ.

**ಓದಲಾಗಿದೆ:** (1) ದಿನಾಂಕ: 10–07–1996 ರ ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 01 ಟಿಎಫ್‌ಪಿ 96.

(2) ದಿನಾಂಕ: 30–11–2009, 03–05–2011 ಹಾಗೂ ದಿನಾಂಕ: 18–08–2011 ರ ಸರ್ಕಾರಿ ಮುದ್ರಣ ಇಲಾಖೆಯ ನಿರ್ದೇಶಕರ ಪತ್ರ ಸಂಖ್ಯೆ: ಡಿಪಿಎಸ್/ಸಿಬ್ಬಂದಿ/ಸಿಸಿಎ/ಪಿ(ಪಿ)193/2009–10/ಸಿಸಿಎ–130(09)/1477/2011–12.

**ಪ್ರಸ್ತಾವನೆ :**

1. ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಇಂಥಹ ಪ್ರಕರಣಗಳನ್ನು ಪರಿಶೀಲಿಸಲು ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿ ಆದೇಶಿಸಲಾಗಿದೆ.

2. ಮೇಲೆ (2) ರಲ್ಲಿ ಓದಲಾದ ನಿರ್ದೇಶಕರ ಪ್ರಸ್ತಾವನೆಗಳಲ್ಲಿ ಸರ್ಕಾರಿ ಕೇಂದ್ರ ಮುದ್ರಣಾಲಯ, ಪೀಣ್ಯ ಮತ್ತು ಸರ್ಕಾರಿ ಮುದ್ರಣಾಲಯ, ಪೀಣ್ಯ ಶೆಡ್ ಮುದ್ರಣಾಲಯಗಳನ್ನು ಮೈಸೂರು ರಸ್ತೆ, ಕೆಂಗೇರಿಯ ನೂತನ ಕಟ್ಟಡದಲ್ಲಿರುವ ಸರ್ಕಾರಿ ಕೇಂದ್ರ ಮುದ್ರಣಾಲಯಕ್ಕೆ ಸ್ಥಳಾಂತರಿಸಲಾಗಿರುತ್ತದೆಂದು ನಿರ್ದೇಶಕರು ತಿಳಿಸಿರುತ್ತಾರೆ. ಅಲ್ಲದೆ ನೂತನ ಕಟ್ಟಡದ ಪಕ್ಕದಲ್ಲಿಯೇ ಸರ್ಕಾರಿ ಹೊರವಲಯ ಮುದ್ರಣಾಲಯವು ಸಹ ಕಾರ್ಯ ನಿರ್ವಹಿಸುತ್ತಿರುವುದಾಗಿ ತಿಳಿಸಿರುತ್ತಾರೆ. ಒಂದೇ ಆವರಣದಲ್ಲಿ ಮೂರು ಮುದ್ರಣಾಲಯಗಳು ಕಾರ್ಯ ನಿರ್ವಹಿಸುತ್ತಿದೆ. ಈ ಮುದ್ರಣಾಲಯಗಳಿಗೆ ಪ್ರತ್ಯೇಕವಾದ ಮಂಜೂರಾದ ವೃಂದ ಬಲವಿರುತ್ತದೆ. ಹಾಗೂ ಅಪೆಂಡಿಕ್ಸ್–'ಬಿ' ರಲ್ಲಿಯೂ ಪ್ರತ್ಯೇಕವಾಗಿ ತೋರಿಸಲಾಗಿರುತ್ತದೆ. ಮೂರು ಮುದ್ರಣಾಲಯಗಳಿಗೂ ಬೇರೆ ಬೇರೆ ಹಣ ಸೆಳೆಯುವ ಮತ್ತು ಬಟವಾಡೆ ಮಾಡುವ ಅಧಿಕಾರಿಗಳಿರುತ್ತಾರೆ. ಪ್ರಸ್ತುತ ನೌಕರರ ಸಂಬಳ ಮತ್ತು ಇತರೇ ಭತ್ಯೆಗಳನ್ನು ಹೆಚ್.ಆರ್.ಎಂ.ಎಸ್. ನಲ್ಲಿ ಡ್ರಾ ಮಾಡಲಾಗುತ್ತಿರುವುದರಿಂದ ಒಂದೇ ಕಡೆ ಎಲ್ಲಾ ನೌಕರರ ವೇತನಗಳನ್ನೂ ಅಭ್ಯರ್ಥಿಸುವ ವ್ಯವಸ್ಥೆಯನ್ನು ಮಾಡಿಕೊಳ್ಳಬಹುದಾಗಿರುತ್ತದೆ. ಇದರಿಂದ ಲೆಕ್ಕ ಪತ್ರ ಮತ್ತು ಆಡಳಿತಕ್ಕೆ ಸಂಬಂಧಿಸಿದ ಸಿಬ್ಬಂದಿಗಳನ್ನು ಕಡಿತಗೊಳಿಸಲೂ ಸಹ ಅನುಕೂಲವಾಗುತ್ತದೆ. ಅಲ್ಲದೇ, ಕೆಲವೊಂದು ವಿಭಾಗಗಳನ್ನೂ ಸಹ ಒಗ್ಗೂಡಿಸಬಹುದಾಗಿರುತ್ತದೆ. ಇದರಿಂದ, ಮೇಲ್ವಿಚಾರಣ ವೆಚ್ಚವನ್ನೂ ಸಹ ಕಡಿಮೆಗೊಳಿಸಬಹುದಾಗಿರುತ್ತದೆ. ಎರಡೂ ಮುದ್ರಣಾಲಯಗಳೂ ಒಂದೇ ಕಟ್ಟಡದಲ್ಲಿರುತ್ತವೆ. ಮತ್ತು ಇನ್ನೊಂದು ಮುದ್ರಣಾಲಯವು ಪಕ್ಕದ ಕಟ್ಟಡದಲ್ಲಿ ಇರುತ್ತದೆ. ಇಲ್ಲಿನ ಸಿಬ್ಬಂದಿಗಳನ್ನು ಈ ಮುದ್ರಣಾಲಯಗಳಲ್ಲಿಯೇ ಕೆಲಸ ಹಂಚಿಕೆ ಮಾಡಬೇಕಾದರೆ ವರ್ಗಾವಣೆ ಅವಧಿಯಲ್ಲಿಯೇ ಮಾಡಬೇಕು. ಇದನ್ನು ವರ್ಗಾವಣೆ ಎಂಬಂತೆ ಪರಿಗಣಿಸಬೇಕಾಗುತ್ತದೆ. ಇದು ಈ ಮುದ್ರಣಾಲಯಗಳ ಕಾರ್ಯ ವೈಖರಿ ಮೇಲೆ ದುಷ್ಪರಿಣಾಮ ಬೀರುತ್ತಿರುತ್ತದೆ. ಆದ್ದರಿಂದ, ನೂತನ ಕಟ್ಟಡಕ್ಕೆ ಸ್ಥಳಾಂತರಿಸಿರುವ ಸರ್ಕಾರಿ ಕೇಂದ್ರ ಮತ್ತು ಪೀಣ್ಯ ಶೆಡ್ ಮುದ್ರಣಾಲಯ ಹಾಗೂ ಸರ್ಕಾರಿ ಹೊರವಲಯ ಮುದ್ರಣಾಲಯಗಳಲ್ಲಿ ಮಂಜೂರಾದ ವೃಂದ ಬಲವನ್ನು ಒಗ್ಗೂಡಿಸಿ ಅಪೆಂಡಿಕ್ಸ್–'ಬಿ' ರಲ್ಲಿ ಸರ್ಕಾರಿ ಕೇಂದ್ರ ಮುದ್ರಣಾಲಯ, ಮೈಸೂರು ರಸ್ತೆ, 8ನೇ ಮೈಲಿ, ಬೆಂಗಳೂರು ಎಂದು ತಿದ್ದುಪಡಿ ಮಾಡುವುದರಿಂದ ಇಲಾಖೆಯ ಆಡಳಿತಾತ್ಮಕ ಕಾರ್ಯಗಳಿಗೆ ಅನುಕೂಲವಾಗುತ್ತದೆ ಹಾಗೂ ಮುಂದೆ ಆರ್ಥಿಕ ಮಿತವ್ಯಯ ಸಾಧಿಸಲು ಸಾಧ್ಯವಾಗುತ್ತದೆಂದು ತಿಳಿಸುತ್ತಾ ಈ ಸಂಬಂಧ ಮುದ್ರಣಾಲಯಗಳಿಗೆ ಅನುಬಂಧ–1 ಮತ್ತು ಅನುಬಂಧ–2 ರಂತೆ ಮಂಜೂರಾದ ಹುದ್ದೆಗಳನ್ನು ಒಗ್ಗೂಡಿಸಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

3. ಸರ್ಕಾರಿ ಮುದ್ರಣ ಇಲಾಖೆಯ ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 193 ಇಎಸ್‌ಡಬ್ಲ್ಯೂ, 2011, ಬೆಂಗಳೂರು, ದಿನಾಂಕ: 20–01–2012**

ಬೆಂಗಳೂರಿನ ಪೀಣ್ಯ ಸರ್ಕಾರಿ ಮುದ್ರಣಾಲಯ ಮತ್ತು ಪೀಣ್ಯ ಶೆಡ್ ಸರ್ಕಾರಿ ಮುದ್ರಣಾಲಯಗಳನ್ನು ಮೈಸೂರು ರಸ್ತೆ, ಕೆಂಗೇರಿಯಲ್ಲಿರುವ ಸರ್ಕಾರಿ ಕೇಂದ್ರ ಮುದ್ರಣಾಲಯದ ನೂತನ ಕಟ್ಟಡಕ್ಕೆ ಸ್ಥಳಾಂತರಿಸಿರುವ ಹಿನ್ನೆಲೆಯಲ್ಲಿ ಅನುಬಂಧ–1 ಮತ್ತು ಅನುಬಂಧ–2 ರಲ್ಲಿ ನಮೂದಿಸಿರುವಂತೆ ಸದರಿ ಮುದ್ರಣಾಲಯಗಳಿಗೆ ಮಂಜೂರಾಗಿರುವ ಹುದ್ದೆಗಳನ್ನು ಒಗ್ಗೂಡಿಸಿ ಅಪೆಂಡಿಕ್ಸ್–'ಬಿ' ನಲ್ಲಿ ಒಟ್ಟಿಗೆ ಸೇರಿಸಿ ಬೆಂಗಳೂರಿನ ಸರ್ಕಾರಿ ಕೇಂದ್ರ ಮುದ್ರಣಾಲಯದಡಿ ತರಲು ಸರ್ಕಾರದ ಮಂಜೂರಾತಿಯನ್ನು ನೀಡಿ ಆದೇಶಿಸಿದೆ.

ಈ ಆದೇಶವನ್ನು ದಿನಾಂಕ: 12–12–2011 ರ ಆರ್ಥಿಕ ಇಲಾಖೆಯ ಅ. ಟಿ. ಸಂಖ್ಯೆ: ಆಇ 826 ವೆಚ್ಚ–8 2011 ರಲ್ಲಿನ ಸಹಮತಿಯಂತೆ ಹಾಗೂ ದಿನಾಂಕ: 10–07–1996 ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಬಿ. ಪಟಗಾರ್**

ಸರ್ಕಾರದ ಅಧೀನ ಕಾರ್ಯದರ್ಶಿ (ಸಾಮಾನ್ಯ)

ಶಿಕ್ಷಣ ಇಲಾಖೆ

**ಸರ್ಕಾರಿ ಕೇಂದ್ರ ಮುದ್ರಣಾಲಯ, ಶೆಡ್ ಘಟಕ ಹಾಗೂ ಸರ್ಕಾರಿ ಹೊರವಲಯ ಮುದ್ರಣಾಲಯ ಇಲ್ಲಿ ಮಂಜೂರಾದ ಹುದ್ದೆಗಳ ವಿವರಣಾ ಪಟ್ಟಿ (ಅನುಬಂಧ–1)**

| Sl. No. | Name of the Cadre | Sanctioned Posts in Govt. Central Press | Sanctioned Posts in Govt. Press Shed | Sanctioned Posts in Govt. Sub-urban Press | Total |
|---|---|---|---|---|---|
| 1 | 2 | 3 | 4 | 5 | 6 |
| 1 | Director | 1 | | | 1 |
| 2 | Joint Director | 1 | | 1 | 2 |
| 3 | Sr. Dy. Director | 1 | | | 1 |
| 4 | Dy. Director (Acct. & Ad) | 1 | | | 1 |
| 5 | Asst. Director (Non-Tech) | 2 | 1 | 1 | 4 |
| 6 | Asst. Director (Tech) | 4 | 1 | 2 | 7 |
| 7 | Labour Welfare Officer | 1 | | | 1 |
| 8 | Medical Officer | 1 | | | 1 |
| 9 | Audit Superintendent | 1 | | | 1 |
| 10 | Superintendent (M) | 5 | 1 | 2 | 8 |
| 11 | Chief Cost Accountant | 1 | | | 1 |
| 12 | Cost Accountant | 2 | | 2 | 4 |
| 13 | F.D.A. (Auditor) | 1 | | 1 | 2 |
| 14 | F.D.A. (M) | 10 | 2 | 5 | 17 |
| 15 | Stenographer | 1 | | 2 | 3 |
| 16 | Senior Typist | 1 | | | 1 |
| 17 | S.D.A. (M) | 10 | 4 | 10 | 24 |
| 18 | Typist | 2 | 1 | 1 | 4 |
| 19 | Nurse | | | 1 | 1 |
| 20 | Pharmacist | | | 1 | 1 |
| 21 | Daffedar | | 1 | | 1 |
| 22 | Gardner | 1 | | | 1 |
| 23 | Attender | 4 | 1 | 3 | 8 |
| 24 | Lorry Driver | 1 | | | 1 |
| 25 | Jeep Driver | 1 | | | 1 |
| 26 | Driver | 3 | | 1 | 4 |
| 27 | Peon | 11 | 2 | 6 | 19 |
| 28 | Supervisor | 7 | | 6 | 13 |
| 29 | Artist | 1 | | 2 | 3 |
| 30 | Foreman | 14 | 6 | 17 | 37 |
| 31 | Mechanical Foreman | 1 | | 1 | 2 |
| 32 | Chief Examiner | 2 | | | 2 |
| 33 | Deputy Chief Examiner | 1 | | 1 | 2 |
| 34 | Superintendent (1) | 2 | | 1 | 3 |
| 35 | Senior Proof Examiner | 8 | 3 | 4 | 15 |
| 36 | Technical Assistant | 2 | 1 | 4 | 7 |
| 37 | F.D.A. (Indl) | 6 | | 5 | 11 |
| 38 | S.D.A. (Indl) | 15 | 10 | 10 | 35 |
| 39 | Junior Proof Examiner | 17 | 11 | 7 | 35 |
| 40 | Electrician | 1 | | 1 | 2 |
| 41 | Senior Offset Printer | 5 | | 7 | 12 |
| 42 | Offset Printer | 7 | | 15 | 22 |
| 43 | Asst. Offset Printer | 22 | | 20 | 42 |
| 44 | Sr. D.T.P. Operator | 4 | | 3 | 7 |
| 45 | Asst. D.T.P. Operator | 15 | | 9 | 24 |
| 46 | Chief Time Keeper | 1 | | | 1 |
| 47 | Time Keeper | 1 | | 2 | 3 |
| 48 | Gate Keeper | 1 | | 1 | 2 |

| | | | | | |
|---|---|---|---|---|---|
| 49 | Asst. Gate Keeper | 1 | | 2 | 3 |
| 50 | Senior Binder | 15 | 11 | 12 | 38 |
| 51 | Binder | 30 | 20 | 20 | 70 |
| 52 | Asst. Binder | 28 | 10 | 95 | 133 |
| 53 | Head Caster | 2 | 1 | 2 | 5 |
| 54 | Caster | 6 | | 5 | 11 |
| 55 | Assistant Caster | | | 5 | 5 |
| 56 | Sr. Packer | | 9 | 2 | 11 |
| 57 | Head Packer | | 2 | 1 | 3 |
| 58 | Packer | 6 | 4 | 8 | 18 |
| 59 | Lino Mono Operator | 4 | 5 | 7 | 16 |
| 60 | Senior Compositors | 12 | 15 | 20 | 47 |
| 61 | Compositor | 42 | 32 | 44 | 118 |
| 62 | Senior Machine Minder | 15 | 5 | 10 | 30 |
| 63 | Machine Minder | 22 | 12 | 26 | 60 |
| 64 | Rubber Stamp Caster | 2 | | | 2 |
| 65 | Senior Plate Maker | 2 | | 4 | 6 |
| 66 | Plate Maker | 4 | | 5 | `9 |
| 67 | Wireman | | | 1 | 1 |
| 68 | Mechanic | 2 | 1 | 2 | 5 |
| 69 | Assistant Mechanic | | | 1 | 1 |
| 70 | Attender (1) | 2 | 2 | 4 | 8 |
| 71 | Watchman | 3 | 2 | 2 | 7 |
| 72 | Night Watchman | | | 1 | 1 |
| 73 | Sweeper/Scavenger | 7 | 2 | `11 | 20 |
| 74 | Head Carpenter | | | 2 | 2 |
| | Total | 405 | 178 | 447 | 1030 |

**ಸರ್ಕಾರಿ ಕೇಂದ್ರ ಮುದ್ರಣಾಲಯ, ಶೆಡ್ ಘಟಕ ಹಾಗೂ ಸರ್ಕಾರಿ ಹೊರವಲಯ ಮುದ್ರಣಾಲಯ ಇಲ್ಲಿ ಮಂಜೂರಾದ ಹುದ್ದೆಗಳನ್ನು ಒಗ್ಗೂಡಿಸಿದ ತುಲನಾತ್ಮಕ ಪಟ್ಟಿ (ಅನುಬಂಧ–2)**

| Sl. No. | Name of the Cadre | Sanctioned Posts in Govt. Central Press Mysore Road, Bangalore |
|---|---|---|
| **1** | **2** | **3** |
| 1 | Director | 1 |
| 2 | Joint Director | 2 |
| 3 | Sr. Dy. Director | 1 |
| 4 | Dy. Director (Acct. & Ad) | 1 |
| 5 | Asst. Director (Non-Tech) | 4 |
| 6 | Asst. Director (Tech) | 7 |
| 7 | Labour Welfare Officer | 1 |
| 8 | Medical Officer | 1 |
| 9 | Audit Superintendent | 1 |
| 10 | Superintendent (M) | 8 |
| 11 | Chief Cost Accountant | 1 |
| 12 | Cost Accountant | 4 |
| 13 | F.D.A. (Auditor) | 2 |
| 14 | F.D.A. (M) | 17 |
| 15 | Stenographer | 3 |
| 16 | Senior Typist | 1 |
| 17 | S.D.A. (M) | 24 |
| 18 | Typist | 4 |
| 19 | Nurse | 1 |
| 20 | Pharmacist | 1 |
| 21 | Daffedar | 1 |
| 22 | Gardner | 1 |

| | | |
|---|---|---|
| 23 | Attender | 8 |
| 24 | Lorry Driver | 1 |
| 25 | Jeep Driver | 1 |
| 26 | Driver | 4 |
| 27 | Peon | 19 |
| 28 | Supervisor | 13 |
| 29 | Artist | 3 |
| 30 | Foreman | 37 |
| 31 | Mechanical Foreman | 2 |
| 32 | Chief Examiner | 2 |
| 33 | Deputy Chief Examiner | 2 |
| 34 | Superintendent (I) | 3 |
| 35 | Senior Proof Examiner | 15 |
| 36 | Technical Assistant | 7 |
| 37 | F.D.A. (Indl) | 11 |
| 38 | S.D.A. (Indl) | 35 |
| 39 | Junior Proof Examiner | 35 |
| 40 | Electrician | 2 |
| 41 | Senior Offset Printer | 12 |
| 42 | Offset Printer | 22 |
| 43 | Sr. D.T.P. Operator | 7 |
| 44 | Asst. Offset Printer | 42 |
| 45 | Asst. D.T.P. Operator | 24 |
| 46 | Chief Time Keeper | 1 |
| 47 | Time Keeper | 3 |
| 48 | Gate Keeper | 2 |
| 49 | Asst. Gate Keeper | 3 |
| 50 | Senior Binder | 38 |
| 51 | Binder | 70 |
| 52 | Asst. Binder | 133 |
| 53 | Head Caster | 5 |
| 54 | Caster | 11 |
| 55 | Assistant Caster | 5 |
| 56 | Sr. Packer | 11 |
| 57 | Head Packer | 3 |
| 58 | Packer | 18 |
| 59 | Lino Mono Operator | 16 |
| 60 | Senior Compositors | 47 |
| 61 | Compositor | 118 |
| 62 | Senior Machine Minder | 30 |
| 63 | Machine Minder | 60 |
| 64 | Rubber Stamp Caster | 2 |
| 65 | Senior Plate Maker | 6 |
| 66 | Plate Maker | 9 |
| 67 | Wireman | 1 |
| 68 | Mechanic | 5 |
| 69 | Assistant Mechanic | 1 |
| 70 | Attender (I) | 8 |
| 71 | Watchman | 7 |
| 72 | Night Watchman | 1 |
| 73 | Sweeper/Scavenger | 20 |
| 74 | Head Carpenter | 2 |
| | **Total** | **1030** |

**ಎಸ್.ಬಿ. ಪಟಗಾರ್**

ಪಿ.ಆರ್. 434

ಸರ್ಕಾರದ ಅಧೀನ ಕಾರ್ಯದರ್ಶಿ (ಸಾಮಾನ್ಯ)

ಶಿಕ್ಷಣ ಇಲಾಖೆ

## ಶಿಕ್ಷಣ ಸಚಿವಾಲಯ

**ವಿಷಯ :** ಚಿಕ್ಕಬಳ್ಳಾಪುರ ಸರ್ಕಾರಿ ಶಿಕ್ಷಕರ ತರಬೇತಿ ಸಂಸ್ಥೆಯ ಬೋಧಕ ಸಿಬ್ಬಂದಿಗೆ ಪದನಾಮದೊಂದಿಗೆ ಪರಿಷ್ಕರಿಸಿದ ವೇತನ ಶ್ರೇಣಿಯನ್ನು ನೀಡುವ ಬಗ್ಗೆ.

**ಓದಲಾಗಿದೆ:** (1) ದಿನಾಂಕ: 16-02-2010 ರ ಸರ್ಕಾರದ ಆದೇಶ ಸಂಖ್ಯೆ:ಇಡಿ 121 ಪಿಟಿಐ 2009.

(2) ದಿನಾಂಕ: 11-02-2011 ರ ಸರ್ಕಾರದ ಆದೇಶ ಸಂಖ್ಯೆ:ಇಡಿ 366 ಪಿಟಿಐ 2010.

(3) ದಿನಾಂಕ: 10-03-2011 ರ ಚಿಕ್ಕಬಳ್ಳಾಪುರ ಸರ್ಕಾರಿ ಟಿ.ಟಿ.ಐ.ನ ಬೋಧಕ ಸಿಬ್ಬಂದಿಯವರ ಮನವಿ.

(4) ದಿನಾಂಕ: 03-06-2011 ರ ಡಿ.ಎಸ್.ಇ.ಆರ್.ಟಿ. ನಿರ್ದೇಶಕರ ಪತ್ರ ಸಂಖ್ಯೆ: ಶಿತ6, ಹಸ್ತಾಂತರ 59/2010-11/17.

(5) ದಿನಾಂಕ: 03-12-2011 ರ ಸಾರ್ವಜನಿಕ ಶಿಕ್ಷಣ ಇಲಾಖೆಯ ಆಯುಕ್ತರ ಪತ್ರ ಸಂಖ್ಯೆ: ಸಿ(1)ಇತರೆ.ಶಿ.ತ.ಸಂ.ಪ್ರಾ.ಹು.ನೇ-11/2011-12.

**ಪ್ರಸ್ತಾವನೆ :**

1. ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಚಿಕ್ಕಬಳ್ಳಾಪುರ ನಗರಸಭೆಯ ಆಡಳಿತದಲ್ಲಿರುವ ಡಿ.ಎಡ್., ಕಾಲೇಜನ್ನು ಬೋಧಕ/ಬೋಧಕೇತರ ಸಿಬ್ಬಂದಿ ಸಮೇತ ಸರ್ಕಾರದ ನೇರ ಆಡಳಿತಕ್ಕೆ ಒಳಪಡಿಸಲಾಗಿದೆ.

2. ಮೇಲೆ (2) ರಲ್ಲಿ ಓದಲಾದ ಆದೇಶದಲ್ಲಿ ಸರ್ಕಾರಿ ಮತ್ತು ಅನುದಾನಿತ ಶಿಕ್ಷಕರ ತರಬೇತಿ ಸಂಸ್ಥೆಗಳ ಸ್ನಾತಕೋತ್ತರ ಪದವಿ ಪಡೆದ ಬೋಧಕ ಸಿಬ್ಬಂದಿ ವೇತನ ಶ್ರೇಣಿಯನ್ನು 5ನೇ ವೇತನ ಆಯೋಗದ ವರದಿಯನ್ವಯ ಪರಿಷ್ಕರಿಸಿ ಆದೇಶಿಸಲಾಗಿದೆ. ಸದರಿ ಆದೇಶದಂತೆ ವೇತನ ಶ್ರೇಣಿಯನ್ನು ಪರಿಷ್ಕರಿಸಿ ನಿಗದಿಗೊಳಿಸುವಂತೆ ಮೇಲೆ (3) ರಲ್ಲಿ ಓದಲಾದ ಮನವಿಯಲ್ಲಿ ಚಿಕ್ಕಬಳ್ಳಾಪುರ ಟಿ.ಟಿ.ಐ. ನ ಬೋಧಕ ಸಿಬ್ಬಂದಿಯವರು ಸರ್ಕಾರಕ್ಕೆ ಮನವಿಯನ್ನು ಸಲ್ಲಿಸಿರುತ್ತಾರೆ. ಸದರಿ ಮನವಿಯ ಮೇಲೆ ಡಿ.ಎಸ್.ಇ.ಆರ್.ಟಿ. ನಿರ್ದೇಶಕರು ಮೇಲೆ (4) ರಲ್ಲಿ ಓದಲಾದ ಪತ್ರದಂತೆ ವರದಿಯನ್ನು ಸಲ್ಲಿಸಿದ್ದು ಅದರಂತೆ, ಸರ್ಕಾರಿ ಶಿಕ್ಷಕರ ತರಬೇತಿ ಸಂಸ್ಥೆ, ಚಿಕ್ಕಬಳ್ಳಾಪುರ ಸಂಸ್ಥೆಯು ಈ ಹಿಂದೆ ಪುರಸಭಾ ಆಡಳಿತಕ್ಕೆ ಒಳಪಟ್ಟ ಸಂಸ್ಥೆಯಾಗಿದ್ದು ಸದರಿ ಸಂಸ್ಥೆಯು ಸರ್ಕಾರದ ಆದೇಶ ಸಂಖ್ಯೆ: ಇಡಿ 121 ಪಿಟಿಐ 2009, ದಿನಾಂಕ: 16-02-2010 ರ ಪ್ರಕಾರ ಚರಾಸ್ತಿಗಳೊಂದಿಗೆ ಕೆಲವು ಷರತ್ತುಗಳನ್ವಯ ಸರ್ಕಾರದ ನೇರ ಆಡಳಿತಕ್ಕೆ ಒಳಪಡಿಸಲಾಗಿರುತ್ತದೆ. ಸದರಿ ಸಿಬ್ಬಂದಿಯವರು ಎನ್.ಸಿ.ಟಿ.ಇ. ನಿಯಮಾನುಸಾರ ಸರ್ಕಾರದ ನೇರ ಆಡಳಿತಕ್ಕೆ ಒಳಪಡಿಸಿದ ದಿನಾಂಕಕ್ಕೆ ಅರ್ಹ ವಿದ್ಯಾರ್ಹತೆಯನ್ನು ಹೊಂದಿದ್ದರು ಹಾಗೂ ಇವರಿಗೆ ವೇತನ ನಿಗದಿಯು ಸಹ ಪ್ರೌಢಶಾಲಾ ಶಿಕ್ಷಕರ ವೇತನವನ್ನೇ ನಿಗದಿಪಡಿಸಲಾಗಿರುತ್ತದೆ. ಪ್ರಸ್ತುತ ಸರ್ಕಾರದ ಆದೇಶ ಸಂಖ್ಯೆ:ಇಡಿ 366 ಪಿಟಿಐ 2010 ಬೆಂಗಳೂರು, ದಿನಾಂಕ: 11-02-2011 ರನ್ವಯ ಸರ್ಕಾರಿ ಶಿಕ್ಷಕರ ತರಬೇತಿ ಸಂಸ್ಥೆಗಳಲ್ಲಿನ ಅಧೀಕ್ಷಕರನ್ನು ಪ್ರಾಂಶುಪಾಲರಾಗಿ, ಪ್ರಶಿಕ್ಷಕರನ್ನು ಉಪನ್ಯಾಸಕರಾಗಿ ಷರತ್ತುಗಳನ್ವಯ ಮರು ಪದನಾಮೀಕರಿಸಿ ವೇತನ ಶ್ರೇಣಿಯನ್ನು ಪರಿಷ್ಕರಿಸಲಾಗಿರುತ್ತದೆ. ಪ್ರಸ್ತುತ ಸರ್ಕಾರಿ ಶಿಕ್ಷಕರ ತರಬೇತಿ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಸಿಬ್ಬಂದಿ ವರ್ಗದವರನ್ನು ಪ್ರೌಢಶಾಲೆಗಳಿಗೆ ಸ್ಥಳ ನಿಯುಕ್ತಿಗೊಳಿಸಲು ಆಯಾ ಆಯುಕ್ತಾಲಯಗಳಿಗೆ ಅನುಮತಿಸಲಾಗಿರುತ್ತದೆ. ಆದ್ದರಿಂದ ಸರ್ಕಾರಿ ಶಿಕ್ಷಕರ ತರಬೇತಿ ಸಂಸ್ಥೆ, ಚಿಕ್ಕಬಳ್ಳಾಪುರ ಸಲ್ಲಿಸಿರುವ ಮನವಿಯನ್ನು ಪರಿಗಣಿಸಲು ಅವಕಾಶವಿಲ್ಲವೆಂದು ಅಭಿಪ್ರಾಯಿಸಿರುತ್ತಾರೆ. ಮೇಲೆ (5) ರಲ್ಲಿ ಓದಲಾದ ಪ್ರಸ್ತಾವನೆಯಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆಯ ಆಯುಕ್ತರು ಸರ್ಕಾರಿ ಶಿಕ್ಷಕರ ತರಬೇತಿ ಸಂಸ್ಥೆಗಳಲ್ಲಿನ ಅಧೀಕ್ಷಕರ ಹುದ್ದೆಗಳನ್ನು ಪ್ರಾಂಶುಪಾಲರು ಎಂದು ಮರು ಪದನಾಮೀಕರಿಸಿರುವುದರಿಂದ ಈ ಹುದ್ದೆಗಳನ್ನು ಶಿಕ್ಷಣಾಧಿಕಾರಿಗಳ ವೃಂದದಿಂದ ಭರ್ತಿ ಮಾಡುವ ಬಗ್ಗೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಲು ತೀರ್ಮಾನಿಸಿದ್ದು, ಮರುಪದನಾಮೀಕರಿಸಿದ ಉಪನ್ಯಾಸಕರ ಹುದ್ದೆಗಳನ್ನು ಸರ್ಕಾರಿ ಪ್ರೌಢಶಾಲಾ ಮುಖ್ಯ ಶಿಕ್ಷಕ ವೃಂದಕ್ಕೆ ಸೇರಿಸಿಕೊಂಡು ಭರ್ತಿ ಮಾಡುವ ಬಗ್ಗೆ ಸ್ಪಷ್ಟೀಕರಣ ಕೋರಿರುವುದಾಗಿ ತಿಳಿಸಿರುತ್ತಾರೆ.

3. ಚಿಕ್ಕಬಳ್ಳಾಪುರ ಸರ್ಕಾರಿ ಶಿಕ್ಷಕರ ತರಬೇತಿ ಸಂಸ್ಥೆಯ ಎಲ್ಲಾ ಬೋಧಕ ಸಿಬ್ಬಂದಿಯು ನೇರವಾಗಿ ಡಿ.ಎಡ್., ಕಾಲೇಜಿಗೆ ಉಪನ್ಯಾಸಕರಾಗಿ ಮತ್ತು ಅಧೀಕ್ಷಕರಾಗಿ ಎನ್.ಸಿ.ಟಿ.ಇ. ನಿಯಮಾನುಸಾರ ನೇರ ನೇಮಕಾತಿ ಹೊಂದಿರುತ್ತಾರೆ. ಸದರಿಯವರುಗಳನ್ನು ಯಾವುದೇ ಪ್ರೌಢ ಶಾಲೆಯಿಂದ ನಿಯೋಜನೆಗೊಳಿಸಿರುವುದಿಲ್ಲ. ಅಲ್ಲದೇ ಸದರಿಯವರ ಜ್ಯೇಷ್ಠತೆಯು ಪ್ರೌಢಶಾಲಾ ಸಹ ಶಿಕ್ಷಕರ ಜ್ಯೇಷ್ಠತಾ ಪಟ್ಟಿಯಲ್ಲಿ ಸೇರಿಸಲ್ಪಟ್ಟಿರುವುದಿಲ್ಲ. ಸದರಿ ಸಂಸ್ಥೆಯನ್ನು ಸರ್ಕಾರವು ತನ್ನ ನೇರ ಆಡಳಿತಕ್ಕೆ ಒಳಪಡಿಸಿ ಹೊರಡಿಸಲಾದ ಆದೇಶದಲ್ಲಿ ಅವರುಗಳನ್ನು ಉಪನ್ಯಾಸಕರು ಮತ್ತು ಪ್ರಾಂಶುಪಾಲರ ಪದನಾಮದೊಂದಿಗೆ ಆದೇಶಿಸಲಾಗಿದೆ. ಈ ಮೇಲಿನ ಉಪನ್ಯಾಸಕರುಗಳು ಮೂಲತಃ ಉಪನ್ಯಾಸಕರುಗಳಾಗಿಯೇ ಚಿಕ್ಕಬಳ್ಳಾಪುರ ಪುರಸಭೆಯ ಮೂಲಕ ನೇಮಕಾತಿ ಹೊಂದಿರುತ್ತಾರೆ. ಪ್ರೌಢಶಾಲಾ ಸಹಾಯಕ ಶಿಕ್ಷಕರ ಜ್ಯೇಷ್ಠತಾ ಪಟ್ಟಿಯಲ್ಲಿ ಸದರಿ ಉಪನ್ಯಾಸಕರ ಹೆಸರುಗಳು ಸೇರಿಸಲ್ಪಟ್ಟಿರುವುದಿಲ್ಲ. ಅಂದರೆ, ಸದರಿಯವರು ಪ್ರೌಢಶಾಲಾ ಶಿಕ್ಷಕರ ವೃಂದಕ್ಕೆ ಸೇರಿಲ್ಲ. ನೇರವಾಗಿ ಉಪನ್ಯಾಸಕರಾಗಿಯೇ ನೇಮಕಾತಿ ಹೊಂದಿರುತ್ತಾರೆ.

4. ಈ ಮೇಲ್ಕಂಡ ಎಲ್ಲಾ ಪ್ರಸ್ತಾವನೆಗಳನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 40 ಪಿಟಿಐ 2011, ಬೆಂಗಳೂರು, ದಿನಾಂಕ: 18-01-2012**

ಚಿಕ್ಕಬಳ್ಳಾಪುರ ನಗರಸಭೆಯ ಆಡಳಿತದಲ್ಲಿದ್ದು, ಸರ್ಕಾರದ ನೇರ ಆಡಳಿತಕ್ಕೆ ಒಳಪಟ್ಟಿರುವ ಚಿಕ್ಕಬಳ್ಳಾಪುರ ಡಿ.ಎಡ್., ಕಾಲೇಜಿನ ಬೋಧಕ ಸಿಬ್ಬಂದಿಯ ಪದನಾಮವನ್ನು ಹಾಗೂ ವೇತನ ಶ್ರೇಣಿಯನ್ನು ಅನುಬಂಧದಲ್ಲಿರುವಂತೆ ದಿನಾಂಕ: 11-02-2011 ರ ಸರ್ಕಾರದ ಆದೇಶ ಸಂಖ್ಯೆ:ಇಡಿ 366 ಪಿಟಿಐ 2010 ರನ್ವಯ ಪರಿಷ್ಕರಿಸಲು ಸರ್ಕಾರದ ಮಂಜೂರಾತಿಯನ್ನು ನೀಡಿ ಆದೇಶಿಸಲಾಗಿದೆ.

ಸದರಿ ಬೋಧಕ ಸಿಬ್ಬಂದಿಯ ವೇತನವನ್ನು ದಿನಾಂಕ: 11-02-2011 ರ ಸರ್ಕಾರದ ಆದೇಶದಂತೆ ಪರಿಷ್ಕರಿಸಿ ನಿಗದಿಗೊಳಿಸುವಂತೆ ಡಿ.ಎಸ್.ಇ.ಆರ್.ಟಿ. ನಿರ್ದೇಶಕರಿಗೆ ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಬಿ. ಪಟಗಾರ್**

ಸರ್ಕಾರದ ಅಧೀನ ಕಾರ್ಯದರ್ಶಿ (ಸಾಮಾನ್ಯ)

ಶಿಕ್ಷಣ ಇಲಾಖೆ

## ಅನುಬಂಧ

**ಸರ್ಕಾರದ ಆದೇಶ ಸಂಖ್ಯೆ: ಇಡಿ 40 ಪಿಟಿಐ 2011, ಬೆಂಗಳೂರು, ದಿನಾಂಕ: 18-01-2012**

**ಬೋಧಕ ವರ್ಗ**

| ಕ್ರ. ಸಂ. | ಹೆಸರು ಹಾಗೂ ವಿದ್ಯಾರ್ಹತೆ | ಈಗಿರುವ ಪದನಾಮ | ಹಾಲಿ ಪಡೆಯುತ್ತಿರುವ ವೇತನ ಶ್ರೇಣಿ ರೂ. | ಮರು ಪದನಾಮೀಕರಿಸಿದ ಪದನಾಮ | ಪರಿಷ್ಕರಿಸಿದ ವೇತನ ಶ್ರೇಣಿ ರೂ. |
|---|---|---|---|---|---|
| 1. | ಶ್ರೀಮತಿ ವಿಜಯಲಕ್ಷ್ಮಿ ವಿ.<br>ಎಂಎ.ಎಂಎಡ್.,ಎಂ.ಫಿಲ್., | ಅಧೀಕ್ಷಕರು | 11,400-21,600 | ಪ್ರಾಂಶುಪಾಲರು | 14,050-25,050 |
| 2. | ಶ್ರೀ ಬಿ. ರವೀಂದ್ರ<br>ಎಂಎಸ್ಸಿ., ಎಂಎಡ್., | ಉಪನ್ಯಾಸಕರು | 8,825-16,000 | ಉಪನ್ಯಾಸಕರು | 11,400-21,600 |
| 3. | ಶ್ರೀ ಸಿ.ಕೆ. ವರದರಾಜು<br>ಎಂಎ., ಎಂಎಡ್., ಎಂ.ಫಿಲ್., | ಉಪನ್ಯಾಸಕರು | 8,825-16,000 | ಉಪನ್ಯಾಸಕರು | 11,400-21,600 |
| 4. | ಶ್ರೀ ಸಿ.ಎನ್. ಸೂರ್ಯಪ್ರಕಾಶ್<br>ಎಂಎಸ್ಸಿ., ಎಂಎ., ಎಂ.ಎಡ್., ಎಂ.ಫಿಲ್., | ಉಪನ್ಯಾಸಕರು | 8,825-16,000 | ಉಪನ್ಯಾಸಕರು | 11,400-21,600 |
| 5. | ಶ್ರೀ ವಿ. ಗುರುಮೂರ್ತಿ<br>ಎಂ.ಎ., ಎಂ.ಎ., ಎಂ.ಎಡ್., | ಉಪನ್ಯಾಸಕರು | 8,825-16,000 | ಉಪನ್ಯಾಸಕರು | 11,400-21,600 |
| 6. | ಶ್ರೀಮತಿ ಹೆಚ್. ಮಮತಾ<br>ಎಂಎಸ್ಸಿ., ಎಂ.ಎಡ್., | ಉಪನ್ಯಾಸಕರು | 8,825-16,000 | ಉಪನ್ಯಾಸಕರು | 11,400-21,600 |
| 7. | ಶ್ರೀ ಎ. ಆನಂದ್<br>ಎಂಎಸ್ಸಿ., ಎಂಎ., ಎಂ.ಎಡ್., ಎಂ.ಫಿಲ್., | ಉಪನ್ಯಾಸಕರು | 8,825-16,000 | ಉಪನ್ಯಾಸಕರು | 11,400-21,600 |
| 8. | ಶ್ರೀ ಕೆ.ಹೆಚ್. ಮೋಹನೇಶ<br>ಎಂಎ., ಎಂ.ಫಿಲ್., ಎಂ.ಎಡ್., ಎಂ.ಫಿಲ್., | ಉಪನ್ಯಾಸಕರು | 8,825-16,000 | ಉಪನ್ಯಾಸಕರು | 11,400-21,600 |

**ಎಸ್.ಬಿ. ಪಟಗಾರ್**
ಸರ್ಕಾರದ ಅಧೀನ ಕಾರ್ಯದರ್ಶಿ (ಸಾಮಾನ್ಯ)
ಶಿಕ್ಷಣ ಇಲಾಖೆ

ಪಿ.ಆರ್. 435

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ರಾಜ್ಯ ಸಿವಿಲ್ ಸೇವೆಗಳಲ್ಲಿನ ಗ್ರೂಪ್-ಎ ವೃಂದದ ಅಧಿಕಾರಿಗಳ ವಾರ್ಷಿಕ ಕಾರ್ಯನಿರ್ವಹಣಾ ವರದಿಗಳನ್ನು ಪರಾಮರ್ಶಿಸಲು ಸಮಿತಿಯನ್ನು ರಚಿಸುವ ಬಗ್ಗೆ.

**ಪ್ರಸ್ತಾವನೆ :**

ಕರ್ನಾಟಕ ಸಿವಿಲ್ ಸೇವಾ (ಕಾರ್ಯನಿರ್ವಹಣಾ ವರದಿ) ನಿಯಮಗಳು, 2000ದ ನಿಯಮ 9ರನ್ವಯ ವರದಿ/ಪರಿಶೀಲನಾ/ಅಂಗೀಕಾರ ಪ್ರಾಧಿಕಾರಗಳು ಸರ್ಕಾರಿ ನೌಕರನ ವಾರ್ಷಿಕ ಕಾರ್ಯನಿರ್ವಹಣಾ ವರದಿಗಳಲ್ಲಿ ಪ್ರತಿಕೂಲ ಅಥವಾ ಸಲಹಾತ್ಮಕ ಷರಾಗಳನ್ನು ದಾಖಲಿಸಿದ್ದಾರೆ, ಆ ಬಗ್ಗೆ ಅಂತಹ ಷರಾಗಳು ಪ್ರತಿಕೂಲವೇ ಅಥವಾ ಸಲಹಾತ್ಮಕವೇ ಎಂಬ ಬಗ್ಗೆ ಟಿಪ್ಪಣಿ ಮಾಡಬೇಕು. ಗ್ರೂಪ್-ಎ ಹಾಗೂ ಮೇಲ್ಪಟ್ಟದ ಅಧಿಕಾರಿಗಳ ಪ್ರಕರಣಗಳಲ್ಲಿ ಸರ್ಕಾರ ಮತ್ತು ಗ್ರೂಪ್-ಬಿ ಹಾಗೂ ಗ್ರೂಪ್-ಸಿ ನೌಕರರ ಪ್ರಕರಣಗಳಲ್ಲಿ ಸಂಬಂಧಪಟ್ಟ ಇಲಾಖಾ ಮುಖ್ಯಸ್ಥರು ವಾರ್ಷಿಕ ಕಾರ್ಯನಿರ್ವಹಣಾ ವರದಿಗಳನ್ನು ಪರಿಶೀಲಿಸಿ ಅದರಲ್ಲಿನ ಷರಾಗಳು ಪ್ರತಿಕೂಲವೇ ಅಥವಾ ಸಲಹಾತ್ಮಕವೇ ಎಂಬುದನ್ನು ನಿರ್ಧರಿಸಬೇಕಾಗುತ್ತದೆ. ಪ್ರತಿಕೂಲ ಷರಾಗಳನ್ನು ಒಳ್ಳೆಯ ಇತರ ಅಂಶಗಳು ಹಾಗೂ ಸಲಹಾತ್ಮಕ ಷರಾಗಳೂ ಸೇರಿದಂತೆ ಸಂಬಂಧಪಟ್ಟ ಸರ್ಕಾರಿ ನೌಕರನಿಗೆ ಸಂಬಂಧಿಸಿದ ಅಂಗೀಕಾರ ಪ್ರಾಧಿಕಾರ ಅಥವಾ ಸರ್ಕಾರದಿಂದ ಅಧಿಕಾರ ಹೊಂದಿದ ಪ್ರಾಧಿಕಾರ ಸಾಮಾನ್ಯವಾಗಿ ವರದಿ-ವರ್ಷ ಮುಗಿದ ಮೂರು ತಿಂಗಳೊಳಗಾಗಿ ತಿಳಿಸತಕ್ಕದ್ದು. ಪ್ರತಿಕೂಲ ಷರಾಗಳ ಬಗ್ಗೆ ಸಂಬಂಧಪಟ್ಟ ನೌಕರರು ಮೇಲ್ಮನವಿಯನ್ನು ಅಂಗೀಕಾರ ಪ್ರಾಧಿಕಾರದ ನಿಕಟ ಮೇಲಿನ ಪ್ರಾಧಿಕಾರಕ್ಕೆ ಅಥವಾ ಸರ್ಕಾರ ಅಧಿಕಾರಯುಕ್ತಗೊಳಿಸಿದ ಇತರ ಪ್ರಾಧಿಕಾರಕ್ಕೆ ಪ್ರತಿಕೂಲ ಷರಾಗಳು ಸ್ವೀಕೃತಗೊಂಡ ದಿನಾಂಕದಿಂದ 45 ದಿನಗಳೊಳಗೆ ಸಲ್ಲಿಸಬಹುದು. ಮೇಲ್ಮನವಿ ಪ್ರಾಧಿಕಾರ ಅವಶ್ಯವೆನಿಸಿದಲ್ಲಿ ಮೇಲ್ಮನವಿಯ ಬಗ್ಗೆ ಸಂಬಂಧಪಟ್ಟ ವರದಿ ಅಥವಾ ಪರಿಶೀಲನಾ ಅಥವಾ ಅಂಗೀಕಾರ ಪ್ರಾಧಿಕಾರದೊಂದಿಗೆ ಸಮಾಲೋಚಿಸಿ ಸೂಕ್ತ ನಿರ್ಣಯವನ್ನು ತೆಗೆದುಕೊಳ್ಳಬೇಕಾಗುತ್ತದೆ. ಆ ನಿರ್ಣಯವನ್ನು ಸಂಬಂಧಿಸಿದ ನೌಕರನಿಗೆ ಕೂಡಲೇ ತಿಳಿಸಬೇಕು. ಸರ್ಕಾರಿ ನೌಕರನ ವಾರ್ಷಿಕ ಕಾರ್ಯನಿರ್ವಹಣಾ ವರದಿಯಲ್ಲಿ ವರದಿ ಪ್ರಾಧಿಕಾರ/ಪರಿಶೀಲನಾ ಪ್ರಾಧಿಕಾರ/ಅಂಗೀಕಾರ ಪ್ರಾಧಿಕಾರ ನೀಡಿದ ಶ್ರೇಣಿ ನೀಡಿಕೆ (Grading)ಯನ್ನು ಸಂಬಂಧಿಸಿದ ನೌಕರನಿಗೆ ತಿಳಿಸಲು ಮೇಲ್ಕಂಡ ನಿಯಮಗಳಲ್ಲಿ ಅವಕಾಶವನ್ನು ಕಲ್ಪಿಸಿರುವುದಿಲ್ಲ.

2. ಸರ್ವೋಚ್ಚ ನ್ಯಾಯಾಲಯವು ಸಿವಿಲ್ ಅಪೀಲು ಸಂಖ್ಯೆ: 7631/2002-ಶ್ರೀ ದೇವದತ್ತ ವಿರುದ್ಧ ಕೇಂದ್ರ ಸರ್ಕಾರ ಪ್ರಕರಣದಲ್ಲಿ, ಸರ್ಕಾರಿ ನೌಕರನನ್ನು ಮುಂಬಡ್ತಿಗೆ ಪರಿಗಣಿಸಿದಾಗ ಆತನ ವಾರ್ಷಿಕ ಕಾರ್ಯನಿರ್ವಹಣಾ ವರದಿಯಲ್ಲಿನ ಶ್ರೇಣಿ ನೀಡಿಕೆಯು ಮುಂಬಡ್ತಿಗೆ ನಿಗದಿಪಡಿಸಿರುವ Bench Mark ಗಿಂತ ಕಡಿಮೆ ಇದ್ದಲ್ಲಿ, ಆ ಕಾರ್ಯನಿರ್ವಹಣಾ ವರದಿಯನ್ನು ಸಂಬಂಧಿಸಿದ ನೌಕರನಿಗೆ ತಿಳಿಸಬೇಕೆಂದು ಮತ್ತು ಸಂಬಂಧಿಸಿದ ನೌಕರನು ಸಲ್ಲಿಸುವ ಮನವಿಯನ್ನು ಪರಿಗಣಿಸಿ ಶ್ರೇಣಿ ನೀಡಿಕೆಯನ್ನು ಮಾರ್ಪಡಿಸುವ ಬಗ್ಗೆ ಸಕ್ಷಮ ಪ್ರಾಧಿಕಾರ ಆದೇಶ ಹೊರಡಿಸಬೇಕೆಂದು ನಿರ್ದೇಶನ ನೀಡಿರುತ್ತದೆ. ಸದರಿ ಆದೇಶದ ಸುಸಂಬದ್ಧವಾದ ಭಾಗವನ್ನು ಕೆಳಗೆ ಉದ್ಧರಿಸಲಾಗಿದೆ:

"In the present case, we are developing the principles of natural justice by holding that fairness and transparency in public administration requires that all entries (whether poor, fair, average, good or very good) in the Annual Confidential Report of a public servant, whether in civil, Judicial, police or any other State service (except the military), must be communicated to him within a reasonable period so that he can make a reresentation for its upgradation. This in our opinion is the correct legal position even though there may be no Rule/G.O. requiring communication of the entry, or even if there is a Rule/G.O. prohibiting it, because the principle of non-arbitrariness in State action as envisaged by Article 14 of the constitution in our opinion requires such communication. Article 14 will override all rules or Government orders."

3. ಸರ್ವೋಚ್ಚ ನ್ಯಾಯಾಲಯದ ಮೇಲ್ಕಂಡ ಆದೇಶವನ್ನು ಅನುಸರಿಸಿ ರಾಜ್ಯ ಸಿವಿಲ್ ಸೇವೆಗಳಲ್ಲಿನ ಕೆಲವು ಗ್ರೂಪ್–ಎ ಅಧಿಕಾರಿಗಳು ತಮ್ಮ ವಾರ್ಷಿಕ ಕಾರ್ಯನಿರ್ವಹಣಾ ವರದಿಯಲ್ಲಿ ದಾಖಲು ಮಾಡಿರುವ ಶ್ರೇಣಿ ನೀಡಿಕೆಯನ್ನು upgrade ಮಾಡುವಂತೆ ಕೋರಿ ಮನವಿ ಸಲ್ಲಿಸುತ್ತಿದ್ದಾರೆ.

4. ಸರ್ವೋಚ್ಚ ನ್ಯಾಯಾಲಯವು ಸಿವಿಲ್ ಅಪೀಲು ಸಂಖ್ಯೆ: 2062/2003 – ಸತ್ಯನಾರಾಯಣ ಶುಕ್ಲ ವಿರುದ್ಧ ಕೇಂದ್ರ ಸರ್ಕಾರ ಪ್ರಕರಣದಲ್ಲಿ ದಿನಾಂಕ 11.5.2006ರಂದು ನೀಡಿರುವ ತೀರ್ಪಿನಲ್ಲಿ ಸರ್ಕಾರಿ ನೌಕರರಿಗೆ ಅವರುಗಳ ಕಾರ್ಯನಿರ್ವಹಣಾ ವರದಿಗಳ ಆಧಾರದ ಮೇಲೆ ಮುಂಬಡ್ತಿ ನೀಡುವ ಬಗ್ಗೆ ಅನುಸರಿಸಬೇಕಾದ ಕಾರ್ಯವಿಧಾನವನ್ನು ನಿಗದಿಪಡಿಸಿ ಸೂಚನೆಗಳನ್ನು ಹೊರಡಿಸುವ ಕಾರ್ಯವು ಸರ್ಕಾರಕ್ಕೆ ಸೇರಿದ ವಿಷಯವಾಗಿದ್ದು, ಈ ಸಂಬಂಧವಾಗಿ ನ್ಯಾಯಾಲಯ ನಿರ್ದೇಶನ ನೀಡುವುದು ಸೂಕ್ತವಲ್ಲವೆಂದು ಅವಲೋಕನೆ ಮಾಡಿರುತ್ತದೆ. ಸದರಿ ಆದೇಶದ ಸುಸಂಬದ್ಧವಾದ ಭಾಗವನ್ನು ಕೆಳಗೆ ಉದ್ಧರಿಸಲಾಗಿದೆ.

"The appellant also argued that the remarks made in the ACR were not communicated to him. It was also urged by the appellant that this Court should direct the authorities to streamline the whole procedure so that even remarks like 'good' or 'very good' made in ACRs should be made compulsorily communicable to the officers concerned so that an officer may not lose his chance of empanelment at a subsequent point of his service.

In our view, it is not our function to issue such directions. It is for the Government to consider how to streamline the procedure for selection. We can only examine if the procedure for selection as adopted by the Government is unconstitutional or otherwise illegal or vitiated by arbitrariness and malafides."

5. The All India Services (Performance Appraisal Report) Rules, 2007ರಲ್ಲಿ Referral Board ರಚಿಸಲು ಅಸ್ಪದ ಕಲ್ಪಿಸಲಾಗಿರುತ್ತದೆ. ಇದೇ ಮಾದರಿಯಲ್ಲಿ ಕರ್ನಾಟಕ ಸಿವಿಲ್ ಸೇವಾ (ಕಾರ್ಯನಿರ್ವಹಣಾ ವರದಿಗಳು) ನಿಯಮಗಳು, 2000ಕ್ಕೆ ತಿದ್ದುಪಡಿ ಮಾಡಿ ಪರಾಮರ್ಶೆ ಸಮಿತಿಯನ್ನು ರಚಿಸಬಹುದಾಗಿರುತ್ತದೆ. ಇದಕ್ಕೆ ಕಾಲಾವಕಾಶಬೇಕಾಗುತ್ತದೆ.

6. ಮೇಲ್ಕಂಡ ಹಿನ್ನೆಲೆಯಲ್ಲಿ, ಸರ್ಕಾರವು ಪ್ರಕರಣವನ್ನು ಸಮಗ್ರವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 1 ಸೇರವ 2011, ಬೆಂಗಳೂರು, ದಿನಾಂಕ: 18–01–2012**

ರಾಜ್ಯ ಸಿವಿಲ್ ಸೇವೆಗಳಲ್ಲಿನ ಗ್ರೂಪ್–ಎ ವೃಂದದ ಅಧಿಕಾರಿಗಳ ವಾರ್ಷಿಕ ಕಾರ್ಯನಿರ್ವಹಣಾ ವರದಿಗಳಲ್ಲಿ ನೀಡಿರುವ ಶೇಣಿಯನ್ನು ಮೇಲ್ದರ್ಜೆಗೇರಿಸಲು ಅಧಿಕಾರಿಗಳು ಸಲ್ಲಿಸುವ ಮನವಿಗಳನ್ನು ಪರಿಗಣಿಸಿ, ಕಾರ್ಯನಿರ್ವಹಣಾ ವರದಿಯಲ್ಲಿ ಮಾಡಿರುವ ಶ್ರೇಣಿ ನೀಡಿಕೆ (Grading)ಯನ್ನು ಪರಾಮರ್ಶಿಸಿ ಆದೇಶಿಸಲು ಈ ಕೆಳಕಂಡಂತೆ ಪರಾಮರ್ಶೆ ಸಮಿತಿಯನ್ನು ರಚಿಸಲಾಗಿದೆ:–

1) ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ
ಅಥವಾ ಸಮಾನಾಂತರ ಅಧಿಕಾರಿ : ಅಧ್ಯಕ್ಷರು
2) ಸಚಿವಾಲಯದ ಸಂಬಂಧಿಸಿದ ಆಡಳಿತ ಇಲಾಖೆಯ
ಸರ್ಕಾರದ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ : ಸದಸ್ಯರು
3) ಸರ್ಕಾರದ ಮುಖ್ಯ ಕಾರ್ಯದರ್ಶಿಯವರು
ನಾಮನಿರ್ದೇಶನ ಮಾಡುವ ಇತರ ಅಧಿಕಾರಿ : ಸದಸ್ಯರು
4) ಸಚಿವಾಲಯದ ಸಂಬಂಧಿಸಿದ ಆಡಳಿತ ಇಲಾಖೆಯ
ಸರ್ಕಾರದ ಉಪ ಕಾರ್ಯದರ್ಶಿ : ಸಂಚಾಲಕರು

ಕರ್ನಾಟಕ ಸಿವಿಲ್ ಸೇವಾ (ಕಾರ್ಯನಿರ್ವಹಣಾ ವರದಿ) ನಿಯಮಗಳು, 2000ಕ್ಕೆ ಸೂಕ್ತ ತಿದ್ದುಪಡಿಯನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಮೊಹಮ್ಮದ್ ಸನಾವುಲ್ಲ**

ಸರ್ಕಾರದ ಪ್ರಧಾನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ

ಪಿ.ಆರ್. 436

## ಇಂಧನ ಸಚಿವಾಲಯ

**ವಿಷಯ :** ಶ್ರೀಮತಿ ಶಮೀಮ್ ಭಾನು, ಭಾ.ಆ.ಸೇ. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಇಂಧನ ಇಲಾಖೆ ಇವರು ದಿನಾಂಕ 16.01.2012ರಂದು ಭಾಗವಹಿಸಬೇಕಾಗಿದ್ದ ಹೆಸ್ಕಾಂ ಆಡಳಿತ ಮಂಡಳಿಯ ಸಭೆ ಹಾಗೂ ಡಾಕ್ಯೂಮೆಂಟ್ ಮ್ಯಾನೇಜ್‌ಮೆಂಟ್ ಸಿಸ್ಟಂ ಉದ್ಘಾಟನಾ ಕಾರ್ಯಕ್ರಮವು ಮುಂದೂಡಲಾದ ಕಾರಣ ಏರ್ ಟಿಕೆಟ್ ರದ್ದುಪಡಿಸಿರುವ ಮೊತ್ತ ರೂ. 1000/–ಗಳನ್ನು ಕ್ಲೇಮ್ ಮಾಡುವ ಬಗ್ಗೆ.

**ಓದಲಾಗಿದೆ:** ಸಂಖ್ಯೆ ಇಎನ್ 15 ಅಮುಕಾ 2012 ದಿನಾಂಕ: 13.1.2012 ರ ಟಿಪ್ಪಣಿ.

**ಪ್ರಸ್ತಾವನೆ :**

ಮೇಲೆ ಓದಲಾದ ಟಿಪ್ಪಣಿಯಲ್ಲಿ ಶ್ರೀಮತಿ ಶಮೀಮ್ ಬಾನು, ಭಾ.ಆ.ಸೇ. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಇಂಧನ ಇಲಾಖೆ ಹಾಗೂ ಅಧ್ಯಕ್ಷರು, ಹೆಸ್ಕಾಂ ರವರು ದಿನಾಂಕ 16.1.2012ರಂದು ಹುಬ್ಬಳ್ಳಿಯಲ್ಲಿ ಹೆಸ್ಕಾಂ ಬೋರ್ಡ್ ಮೀಟಿಂಗ್ ಹಾಗೂ ಹೆಸ್ಕಾಂನ ಡಾಕ್ಯೂಮೆಂಟ್ ಮ್ಯಾನೇಜ್‌ಮೆಂಟ್ ಸಿಸ್ಟಂ ಉದ್ಘಾಟನಾ ಕಾರ್ಯಕ್ರಮದಲ್ಲಿ ಭಾಗವಹಿಸಬೇಕಾಗಿತ್ತು. ಆದರೆ ಅದೇ ದಿನ ಬೆಂಗಳೂರಿನಲ್ಲಿ ಕೆ.ಪಿ.ಟಿ.ಸಿ.ಎಲ್. ಬೋರ್ಡ್ ಮೀಟಿಂಗ್ ಹಾಗೂ ಮತ್ತೊಂದು ತುರ್ತು ಸಭೆ ಏರ್ಪಡಿಸಿದ ಕಾರಣ ಸದರಿ ಹುಬ್ಬಳ್ಳಿ ಪ್ರವಾಸವನ್ನು ಮುಂದೂಡಲಾಯಿತು. ಆದಕಾರಣ ಈ ಪ್ರವಾಸದ ಸಂಬಂಧ ಬೆಂಗಳೂರಿನಿಂದ ಹುಬ್ಬಳ್ಳಿಗೆ ಪ್ರಯಾಣಿಸಲು ಕಾಯ್ದಿರಿಸಿದ ವಿಮಾನದ ಟಿಕೆಟ್ ಸಂಖ್ಯೆ 090/5382008279ನ್ನು ದಿನಾಂಕ 12.1.2012 ರಂದು ರದ್ದುಮಾಡಿಸಬೇಕಾಯಿತು. ಈ ಸಂಬಂಧ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 01 ಸಮನ್ವಯ 2012, ಬೆಂಗಳೂರು, ದಿನಾಂಕ: 23.01.2012**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ವಿಮಾನದ ಟಿಕೆಟ್ ಸಂಖ್ಯೆ 090/5382008279ನ್ನು ದಿನಾಂಕ 12.1.2012 ರಂದು ರದ್ದುಗೊಳಿಸಲಾಗಿದ್ದು, ಈ ಬಾಬ್ತು ಎಂ.ಎಸ್.ಐ.ಎಲ್. ರವರು ವಿಧಿಸಿರುವ ರೂ. 1000/– (ರೂಪಾಯಿ ಒಂದು ಸಾವಿರ ಮಾತ್ರ) ಕ್ಯಾನ್ಸಲೇಷನ್ ಚಾರ್ಜ್‌ನ್ನು ಪಡೆಯಲು ಅನುಮೋದನೆ ನೀಡಲಾಗಿದೆ.

ಸಂಖ್ಯೆ ಇಎನ್ 15 ಅಮುಕಾ 2012 ದಿನಾಂಕ 13.1.2012ರ ಟಿಪ್ಪಣಿ ಮೇರೆಗೆ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

ಪಿ.ಆರ್. 437

## ಇಂಧನ ಸಚಿವಾಲಯ

**ವಿಷಯ :** ಮೆ: ಜಿವಿಆರ್ ಕನ್‌ಸ್ಟ್ರಕ್ಷನ್ಸ್ ಪ್ರೈವೇಟ್ ಲಿಮಿಟೆಡ್ ರವರಿಗೆ ಹಂಚಿಕೆಯಾಗಿರುವ 3.00 ಮೆಗಾ ವ್ಯಾಟ್ ಸಾಮರ್ಥ್ಯದ ಹಂದಿಕಲ್ಲೂರು ಕಿರು ಜಲ ವಿದ್ಯುತ್ ಯೋಜನೆಯನ್ನು ರದ್ದುಪಡಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರಿ ಆದೇಶ ಸಂಖ್ಯೆ : ಇಎನ್ 293 ಎನ್‌ಸಿಇ 2006, ದಿನಾಂಕ : 16–10–2006.
2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕೆಆರ್‌ಇಡಿ/06/SH–251 ಹಂದಿಕಲ್ಲೂರು ಕಿಜವಿಯೊ/2011/4733, ದಿನಾಂಕ : 24/26–12–2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರಿ ಆದೇಶದಲ್ಲಿ ಮೆ: ಜಿವಿಆರ್ ಕನ್‌ಸ್ಟ್ರಕ್ಷನ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಉಡುಪಿ ಜಿಲ್ಲೆಯ ಕಾರ್ಕಳ ತಾಲ್ಲೂಕಿನ ಹಂದಿಕಲುರು ಗ್ರಾಮದ ಬಳಿ ಸೀತಾ ನದಿಗೆ ಅಡ್ಡಲಾಗಿ 3.00 ಮೆಗಾ ವ್ಯಾಟ್ ಸಾಮರ್ಥ್ಯದ ಹಂದಿಕಲುರು ಕಿರು ಜಲ ವಿದ್ಯುತ್ ಯೋಜನೆಯನ್ನು ಜಲ ಸಂಪನ್ಮೂಲ ಇಲಾಖೆ, ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ ಅನುಮತಿ ಪಡೆಯಬೇಕೆಂದು ಹಾಗೂ ಕೆಳ ತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು, ಮೇಲ್ತೊರೆಯಲ್ಲಿರುವ ಮೆ: ಮಾರುತಿ ಪವರ್ ಜನರೇಷನ್ (ಇಂಡಿಯಾ) ಪ್ರೈ ಲಿ., ನವರ ಯೋಜನೆಗಳಿಗೆ ಯಾವುದೇ ದಕ್ಕೆಯಾಗಬಾರದು ಎಂಬ ಷರತ್ತಿಗೊಳಪಟ್ಟು ಹಾಗೂ ಕೆಲವೊಂದು ನಿಬಂಧನೆಗಳಿಗೊಳಪಟ್ಟು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತರವರು ಮೆ: ಜಿವಿಆರ್ ಕನ್‌ಸ್ಟ್ರಕ್ಷನ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಹಂಚಿಕೆಯಾಗಿರುವ ಯೋಜನೆಯು ವನ್ಯಜೀವಿಗಳ ಸುರಕ್ಷಿತ ಪ್ರದೇಶದಲ್ಲಿ ಬರುವುದರಿಂದ ಅರಣ್ಯ ಇಲಾಖೆಯವರು ಸ್ಥಳಾವಕಾಶ ನೀಡಲಾಗುವುದಿಲ್ಲವೆಂದು ತಿಳಿಸಿರುವ ಕಾರಣ ಯೋಜನೆಯನ್ನು ಮುಂದುವರಿಸಲಾಗುವುದಿಲ್ಲವೆಂದೂ ಮತ್ತು ಯೋಜನೆ ರದ್ದುಪಡಿಸುವಂತೆ ಅಭಿವೃದ್ಧಿದಾರರು ಕೋರಿರುವುದನ್ನು ಪರಿಗಣಿಸಿ ಸದರಿ ಯೋಜನೆಯ ಹಂಚಿಕೆ ಆದೇಶವನ್ನು ರದ್ದುಪಡಿಸಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಎನ್ 11 ಎನ್‌ಸಿಇ 2012, ಬೆಂಗಳೂರು, ದಿನಾಂಕ : 21-01-2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಸರ್ಕಾರಿ ಆದೇಶ ಸಂಖ್ಯೆ : ಇಎನ್ 293 ಎನ್‌ಸಿಇ 2006 ದಿನಾಂಕ : 16-10-2006ರಲ್ಲಿ ಮೆ: ಜಿವಿಆರ್ ಕನ್‌ಸ್ಟ್ರಕ್ಷನ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಉಡುಪಿ ಜಿಲ್ಲೆಯ ಕಾರ್ಕಳ ತಾಲ್ಲೂಕಿನ ಹಂದಿಕಲುರು ಗ್ರಾಮದ ಬಳಿ ಸೀತಾ ನದಿಗೆ ಅಡ್ಡಲಾಗಿ ಹಂಚಿಕೆ ಮಾಡಿದ್ದ 3.00 ಮೆಗಾ ವ್ಯಾಟ್ ಸಾಮರ್ಥ್ಯದ ಹಂದಿಕಲುರು ಕಿರು ಜಲ ವಿದ್ಯುತ್ ಯೋಜನೆಯ ಹಂಚಿಕೆಯ ಆದೇಶ ಮತ್ತು ಈ ಸಂಬಂಧ ಸರ್ಕಾರದೊಂದಿಗೆ ಮಾಡಿಕೊಂಡಿರುವ ಒಡಂಬಡಿಕೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ.

ಅಭಿವೃದ್ಧಿದಾರರಿಗೆ ಶುಲ್ಕ ಹಿಂದಿರುಗಿಸುವ ಬಗ್ಗೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತರವರು ತಮ್ಮ ಮಟ್ಟದಲ್ಲೆ ಸೂಕ್ತ ನಿರ್ಧಾರ ತೆಗೆದುಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

ಪಿ.ಆರ್. 438

## ಇಂಧನ ಸಚಿವಾಲಯ

**ವಿಷಯ :** ಮೆ: ಜಿವಿಆರ್ ಕನ್‌ಸ್ಟ್ರಕ್ಷನ್ಸ್ ಪ್ರೈವೇಟ್ ಲಿಮಿಟೆಡ್ ರವರಿಗೆ ಹಂಚಿಕೆಯಾಗಿರುವ 3.00 ಮೆಗಾ ವ್ಯಾಟ್ ಸಾಮರ್ಥ್ಯದ ಚಾರಾ ಕಿರು ಜಲ ವಿದ್ಯುತ್ ಯೋಜನೆಯನ್ನು ರದ್ದುಪಡಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ : ಇಎನ್ 295 ಎನ್‌ಸಿಇ 2006, ದಿನಾಂಕ : 16-10-2006.

2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕೆಆರ್‌ಇಡಿ/06/SH-249 ಚಾರಾ ಕಿಜವಿಯೊ/2011/4731, ದಿನಾಂಕ : 24/26-12-2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರಿ ಆದೇಶದಲ್ಲಿ ಮೆ: ಜಿವಿಆರ್ ಕನ್‌ಸ್ಟ್ರಕ್ಷನ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಉಡುಪಿ ಜಿಲ್ಲೆಯ ಕಾರ್ಕಳ ತಾಲ್ಲೂಕಿನ ಚಾರಾ ಗ್ರಾಮದ ಬಳಿ ಸೀತಾ ನದಿಗೆ ಅಡ್ಡಲಾಗಿ 4.00 ಮೆಗಾ ವ್ಯಾಟ್ ಸಾಮರ್ಥ್ಯದ ಚಾರಾ ಕಿರು ಜಲ ವಿದ್ಯುತ್ ಯೋಜನೆಯನ್ನು ಜಲ ಸಂಪನ್ಮೂಲ ಇಲಾಖೆ, ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ ಅನುಮತಿ ಪಡೆಯಬೇಕೆಂದು ಹಾಗೂ ಕೆಳ ತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು, ಮೇಲ್ತೊರೆಯಲ್ಲಿರುವ ಮೆ: ಮಾರುತಿ ಪವರ್ ಜನರೇಷನ್ (ಇಂಡಿಯಾ) ಪ್ರೈ ಲಿ., ನವರ ಯೋಜನೆಗಳಿಗೆ ಯಾವುದೇ ದಕ್ಕೆಯಾಗಬಾರದು ಎಂಬ ಷರತ್ತಿಗೊಳಪಟ್ಟು ಹಾಗೂ ಕೆಲವೊಂದು ನಿಬಂಧನೆಗಳಿಗೊಳಪಟ್ಟು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತರವರು ಮೆ: ಜಿವಿಆರ್ ಕನ್‌ಸ್ಟ್ರಕ್ಷನ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಹಂಚಿಕೆಯಾಗಿರುವ ಯೋಜನೆಯು ವನ್ಯಜೀವಿಗಳ ಸುರಕ್ಷಿತ ಪ್ರದೇಶದಲ್ಲಿ ಬರುವುದರಿಂದ ಅರಣ್ಯ ಇಲಾಖೆಯವರು ಸ್ಥಳಾವಕಾಶ ನೀಡಲಾಗುವುದಿಲ್ಲವೆಂದು ತಿಳಿಸಿರುವ ಕಾರಣ ಯೋಜನೆಯನ್ನು ಮುಂದುವರಿಸಲಾಗುವುದಿಲ್ಲವೆಂದೂ ಮತ್ತು ಯೋಜನೆ ರದ್ದುಪಡಿಸುವಂತೆ ಅಭಿವೃದ್ಧಿದಾರರು ಕೋರಿರುವುದನ್ನು ಪರಿಗಣಿಸಿ ಸದರಿ ಯೋಜನೆಯ ಹಂಚಿಕೆ ಆದೇಶವನ್ನು ರದ್ದುಪಡಿಸಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಎನ್ 12 ಎನ್‌ಸಿಇ 2012, ಬೆಂಗಳೂರು, ದಿನಾಂಕ : 21-01-2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಸರ್ಕಾರಿ ಆದೇಶ ಸಂಖ್ಯೆ : ಇಎನ್ 295 ಎನ್‌ಸಿಇ 2006 ದಿನಾಂಕ : 16-10-2006ರಲ್ಲಿ ಮೆ: ಜಿವಿಆರ್ ಕನ್‌ಸ್ಟ್ರಕ್ಷನ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಉಡುಪಿ ಜಿಲ್ಲೆಯ ಕಾರ್ಕಳ ತಾಲ್ಲೂಕಿನ ಚಾರಾ ಗ್ರಾಮದ ಬಳಿ ಸೀತಾ ನದಿಗೆ ಅಡ್ಡಲಾಗಿ ಹಂಚಿಕೆ ಮಾಡಿದ್ದ 4.00 ಮೆಗಾ ವ್ಯಾಟ್ ಸಾಮರ್ಥ್ಯದ ಹಂದಿಕಲುರು ಕಿರು ಜಲ ವಿದ್ಯುತ್ ಯೋಜನೆಯ ಹಂಚಿಕೆಯ ಆದೇಶ ಮತ್ತು ಈ ಸಂಬಂಧ ಸರ್ಕಾರದೊಂದಿಗೆ ಮಾಡಿಕೊಂಡಿರುವ ಒಡಂಬಡಿಕೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ.

ಅಭಿವೃದ್ಧಿದಾರರಿಗೆ ಶುಲ್ಕ ಹಿಂದಿರುಗಿಸುವ ಬಗ್ಗೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತರವರು ತಮ್ಮ ಮಟ್ಟದಲ್ಲೆ ಸೂಕ್ತ ನಿರ್ಧಾರ ತೆಗೆದುಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

ಪಿ.ಆರ್. 439

## ಇಂಧನ ಸಚಿವಾಲಯ

**ವಿಷಯ :** ಮೆ: ಜಿವಿಆರ್ ಕನ್‌ಸ್ಟ್ರಕ್ಷನ್ಸ್ ಪ್ರೈವೇಟ್ ಲಿಮಿಟೆಡ್ ರವರಿಗೆ ಹಂಚಿಕೆಯಾಗಿರುವ 4.00 ಮೆಗಾ ವ್ಯಾಟ್ ಸಾಮರ್ಥ್ಯದ ಸೀತಾನದಿ II ಕಿರು ಜಲ ವಿದ್ಯುತ್ ಯೋಜನೆಯನ್ನು ರದ್ದುಪಡಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ : ಇಎನ್ 288 ಎನ್‌ಸಿಇ 2006, ದಿನಾಂಕ : 16-10-2006.

2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕೆಆರ್‌ಇಡಿ/06/SH-250/ಸೀತಾನದಿ II ಕಿಜವಿಯೊ/2011/4732, ದಿನಾಂಕ : 24/26-12-2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರಿ ಆದೇಶದಲ್ಲಿ ಮೆ: ಜಿವಿಆರ್ ಕನ್‌ಸ್ಟ್ರಕ್ಷನ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಉಡುಪಿ ಜಿಲ್ಲೆಯ ಕಾರ್ಕಳ ತಾಲ್ಲೂಕಿನ ಸೀತಾನದಿ ಗ್ರಾಮದಿಂದ 3 ಕಿ.ಮೀ. ನಲ್ಲಿ ಹೆಬ್ರಿಯಿಂದ 9 ಕಿ.ಮೀ. ನಲ್ಲಿ ಸೀತಾ ನದಿಗೆ ಅಡ್ಡಲಾಗಿ 4.00 ಮೆಗಾ ವ್ಯಾಟ್

ಸಾಮರ್ಥ್ಯದ ಸೀತಾನದಿ II ಕಿರು ಜಲ ವಿದ್ಯುತ್ ಯೋಜನೆಯನ್ನು ಜಲ ಸಂಪನ್ಮೂಲ ಇಲಾಖೆ, ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ ಅನುಮತಿ ಪಡೆಯಬೇಕೆಂದು ಹಾಗೂ ಕೆಳ ತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು, ಕೆಳತೊರೆಯಲ್ಲಿರುವ ಮೆ: ಮಾರುತಿ ಪವರ್ ಜನರೇಷನ್ (ಇಂಡಿಯಾ) ಪ್ರೈ ಲಿ., ನವರ ಯೋಜನೆಗಳಿಗೆ ಯಾವುದೇ ದಕ್ಕೆಯಾಗಬಾರದು ಎಂಬ ಷರತ್ತಿಗೊಳಪಟ್ಟು ಹಾಗೂ ಕೆಲವೊಂದು ನಿಬಂಧನೆಗಳಿಗೊಳಪಟ್ಟು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತರವರು ಮೆ: ಜಿವಿಆರ್ ಕನ್‌ಸ್ಟ್ರಕ್ಷನ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಹಂಚಿಕೆಯಾಗಿರುವ ಯೋಜನೆಯು ವನ್ಯಜೀವಿಗಳ ಸುರಕ್ಷಿತ ಪ್ರದೇಶದಲ್ಲಿ ಬರುವುದರಿಂದ ಅರಣ್ಯ ಇಲಾಖೆಯವರು ಸ್ಥಳಾವಕಾಶ ನೀಡಲಾಗುವುದಿಲ್ಲವೆಂದು ತಿಳಿಸಿರುವ ಕಾರಣ ಯೋಜನೆಯನ್ನು ಮುಂದುವರಿಸಲಾಗುವುದಿಲ್ಲವೆಂದೂ ಮತ್ತು ಯೋಜನೆ ರದ್ದುಪಡಿಸುವಂತೆ ಅಭಿವೃದ್ಧಿದಾರರು ಕೋರಿರುವುದನ್ನು ಪರಿಗಣಿಸಿ ಸದರಿ ಯೋಜನೆಯ ಹಂಚಿಕೆ ಆದೇಶವನ್ನು ರದ್ದುಪಡಿಸಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಎನ್ 13 ಎನ್‌ಸಿಇ 2012, ಬೆಂಗಳೂರು, ದಿನಾಂಕ : 21–01–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಸರ್ಕಾರಿ ಆದೇಶ ಸಂಖ್ಯೆ : ಇಎನ್ 288 ಎನ್‌ಸಿಇ 2006 ದಿನಾಂಕ : 16–10–2006ರಲ್ಲಿ ಮೆ: ಜಿವಿಆರ್ ಕನ್‌ಸ್ಟ್ರಕ್ಷನ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಉಡುಪಿ ಜಿಲ್ಲೆಯ ಕಾರ್ಕಳ ತಾಲ್ಲೂಕಿನ ಸೀತಾ ನದಿ ಗ್ರಾಮದಿಂದ 3 ಕಿ.ಮೀ. ನಲ್ಲಿ ಹೆಬ್ರಿಯಿಂದ 9 ಕಿ.ಮೀ. ನಲ್ಲಿ ಸೀತಾ ನದಿಗೆ ಅಡ್ಡಲಾಗಿ ಹಂಚಿಕೆ ಮಾಡಿದ್ದ 4.00 ಮೆಗಾ ವ್ಯಾಟ್ ಸಾಮರ್ಥ್ಯದ ಸೀತಾನದಿ II ಕಿರು ಜಲ ವಿದ್ಯುತ್ ಯೋಜನೆಯ ಹಂಚಿಕೆಯ ಆದೇಶ ಮತ್ತು ಈ ಸಂಬಂಧ ಸರ್ಕಾರದೊಂದಿಗೆ ಮಾಡಿಕೊಂಡಿರುವ ಒಡಂಬಡಿಕೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ.

ಅಭಿವೃದ್ಧಿದಾರರಿಗೆ ಶುಲ್ಕ ಹಿಂದಿರುಗಿಸುವ ಬಗ್ಗೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತರವರು ತಮ್ಮ ಮಟ್ಟದಲ್ಲೆ ಸೂಕ್ತ ನಿರ್ಧಾರ ತೆಗೆದುಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

ಪಿ.ಆರ್. 440

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** ನವಲಗುಂದ ಕಂದಾಯ ತಾಲ್ಲೂಕಿಗೆ ಹೆಚ್ಚುವರಿ ನೋಟರಿ ಹುದ್ದೆಗಳನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ :**

1. ಅಧ್ಯಕ್ಷರು, ವಕೀಲರ ಸಂಘ, ನವಲಗುಂದ ಇವರ ಪತ್ರ ದಿನಾಂಕ : 08–04–2011.
2. ಸರ್ಕಾರದ ಪತ್ರ ಸಂಖ್ಯೆ : ಲಾ 130 ಎಲ್‌ಸಿಎಲ್ 2011, ದಿನಾಂಕ : 08–06–2011 ಹಾಗೂ 06–09–2011.
3. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಧಾರವಾಡ ಇವರ ಪತ್ರ ಸಂಖ್ಯೆ : 1673/2011, ದಿನಾಂಕ : 11–11–2011.

**ಪ್ರಸ್ತಾವನೆ :**

ಅಧ್ಯಕ್ಷರು, ನ್ಯಾಯವಾದಿಗಳ ಸಂಘ, ನವಲಗುಂದ ಇವರು ಮೇಲೆ (1)ರಲ್ಲಿ ಓದಲಾದ ದಿನಾಂಕ : 08–04–2011ರ ಪತ್ರದಲ್ಲಿ ನವಲಗುಂದ ಕಂದಾಯ ತಾಲ್ಲೂಕಿಗೆ ಇಬ್ಬರು ನೋಟರಿಗಳನ್ನು ನೇಮಕ ಮಾಡಿದ್ದು ಅದರಲ್ಲಿ ಒಬ್ಬ ನೋಟರಿಯವರು ಮಾತ್ರ ನೋಟರಿ ಕಾರ್ಯ ನಿರ್ವಹಿಸುತ್ತಿದ್ದು, ಅವರು ತಮ್ಮ ಕೆಲಸ ಕಾರ್ಯನಿಮಿತ್ತ ಬೇರೆ ಊರಿಗೆ ಹೋದಾಗ ಅಫಿಡೆವಿಟ್‌ಗಳನ್ನು ಮಾಡಿಸಿಕೊಳ್ಳಲು ಸಾರ್ವಜನಿಕರಿಗೆ ಬಹಳ ತೊಂದರೆಯಾಗುತ್ತಿದ್ದು, ನವಲಗುಂದ ತಾಲ್ಲೂಕಿಗೆ ಸುಮಾರು 2 ಲಕ್ಷ ಜನ ಸಂಖ್ಯೆ ಹೊಂದಿದ್ದು, 1 ತಾಲ್ಲೂಕು ಪಂಚಾಯಿತಿ 2 ಪುರಸಭೆ ಹಾಗೂ ಅನೇಕ ಮಹಾವಿದ್ಯಾಲಯಗಳನ್ನು, ಪ್ರೌಢಶಾಲೆಗಳನ್ನು ಹೊಂದಿದ್ದು, ದಿನೇ ದಿನೇ ಅಫಿಡವಿಟ್‌ಗಳನ್ನು ಮಾಡಿಸಲು ಅವಶ್ಯಕತೆ ಹೆಚ್ಚಾಗುತ್ತಾ ಇದ್ದು, ಅಂದರೆ ಸಂಧ್ಯಾಸುರಕ್ಷ ವಿಧವಾ ವೇತನ, ಜಾತಿ/ಆದಾಯ, ಜನನ ಮರಣ ಪ್ರಮಾಣ ಪತ್ರ ಇನ್ನೂ ಅನೇಕ ಕೆಲಸ ಕಾರ್ಯಗಳಿಗೆ ಅಫಿಡೆವಿಟ್‌ಗಳ ಅವಶ್ಯಕತೆ ಇದ್ದು ಇರುವ ಒಬ್ಬ ನೋಟರಿಯವರಿಂದ ಪ್ರಮಾಣ ಪತ್ರ ಮಾಡಿಸಿಕೊಳ್ಳಲು ಬಹಳ ತೊಂದರೆಯಾಗುತ್ತಿರುವುದರಿಂದ ನವಲಗುಂದ ತಾಲ್ಲೂಕಿಗೆ 5 ಹೆಚ್ಚುವರಿ ನೋಟರಿಗಳನ್ನು ನೇಮಕ ಮಾಡುವಂತೆ ಕೋರಿದ್ದರು. ಆ ಬಗ್ಗೆ ಪರಿಶೀಲಿಸಿ ವರದಿ ಸಲ್ಲಿಸುವಂತೆ ಮೇಲೆ (2)ರಲ್ಲಿ ಓದಲಾದ ದಿನಾಂಕ : 08–06–2011 ಹಾಗೂ 06–09–2011ರ ಸರ್ಕಾರದ ಪತ್ರಗಳಲ್ಲಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಧಾರವಾಡ ಇವರನ್ನು ಕೋರಲಾಗಿತ್ತು.

ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಧಾರವಾಡ ಇವರು ಮೇಲೆ (3)ರಲ್ಲಿ ಓದಲಾದ ದಿನಾಂಕ : 11–11–2011ರ ಪತ್ರದಲ್ಲಿ ನವಲಗುಂದ ಕಂದಾಯ ತಾಲ್ಲೂಕು ಸುಮಾರು 2 ಲಕ್ಷ ಜನಸಂಖ್ಯೆಯನ್ನು ಹೊಂದಿದ್ದು, ವಾಣಿಜ್ಯ ಹಾಗೂ ಶೈಕ್ಷಣಿಕ ಸಂಸ್ಥೆಗಳ ಹೆಚ್ಚಳದಿಂದ ವ್ಯವಹಾರ, ಸರ್ಕಾರಿ ಕಛೇರಿಗಳ ಕೆಲಸಗಳು ಹೆಚ್ಚಾಗುತ್ತಿದೆ ಎಂದು ತಿಳಿಸಿ ಇನ್ನು ಹೆಚ್ಚುವರಿ ನೋಟರಿ ಹುದ್ದೆಗಳನ್ನು ಸೃಜಿಸುವ ಅವಶ್ಯಕತೆಯಿರುವುದೆಂಬ ಅಭಿಪ್ರಾಯ ನೀಡಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಲಾ 130 ಎಲ್‌ಸಿಎಲ್ 2011, ಬೆಂಗಳೂರು, ದಿನಾಂಕ : 20–01–2012.**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಧಾರವಾಡ ಜಿಲ್ಲೆಯ ನವಲಗುಂದ ಕಂದಾಯ ತಾಲ್ಲೂಕಿಗೆ ಸಾರ್ವಜನಿಕರ ಹಿತದೃಷ್ಟಿಯಿಂದ ಹೆಚ್ಚುವರಿಯಾಗಿ 5 ನೋಟರಿ ಹುದ್ದೆಗಳನ್ನು ಸೃಜಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ. ಕೆ. ಲಕ್ಷ್ಮೀನರಸಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2) (ಪ್ರಭಾರ)
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

ಪಿ.ಆರ್. 441

## ಆರ್ಥಿಕ ಸಚಿವಾಲಯ

**ವಿಷಯ :** ರಾಜ್ಯ ಸರ್ಕಾರದ ಆಸ್ತಿ–ಋಣ ನಿರ್ವಹಿಸಲು ಖಜಾನೆ–II ಯೋಜನೆಯಡಿ ಸಮಾಲೋಚಕರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಆಇ 27307 ಮುಂಗಡ 2011, ದಿನಾಂಕ : 13–12–2011.
2. ಸರ್ಕಾರದ ಪತ್ರ ಸಂಖ್ಯೆ : ಎಫ್‌ಡಿ 5 ಎಸ್‌ಓಎಫ್‌ಸಿ 2011, ದಿನಾಂಕ : 10–01–2012.
3. ಸಮಾಲೋಚಕರ ಪತ್ರ ಸಂಖ್ಯೆ : Consultant (A&LM)/FD/CR-5/2011-12, ದಿನಾಂಕ : 10–01–2012.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ರಾಜ್ಯ ಸರ್ಕಾರದ ಆಸ್ತಿ–ಋಣ ನಿರ್ವಹಣೆಗಾಗಿ ಖಜಾನೆ–II ಯೋಜನೆಯಡಿ ಡಾಟಾಬೇಸ್ ಸಿದ್ಧಪಡಿಸುವ ಮತ್ತು ಆರ್ಥಿಕ ಲೆಕ್ಕಗಳಲ್ಲಿ ಬಾಕಿ ಮೊತ್ತಗಳೆಂದು ತೋರಿಸಲಾದ ಅಂಕಿ–ಅಂಶಗಳ ಹೊಂದಾಣಿಕೆ ಕಾರ್ಯದಲ್ಲಿ ಸರ್ಕಾರಕ್ಕೆ ನೆರವಾಗಲು ಆರು ತಿಂಗಳ ಅವಧಿಗೆ ಸಮಾಲೋಚಕರಾಗಿ ಕಾರ್ಯ ನಿರ್ವಹಿಸುತ್ತಿರುವ ಕೆಳಕಂಡವರಿಗೆ ಪ್ರತಿ ತಿಂಗಳು ಮಾಸಿಕ ವರದಿ ಸಲ್ಲಿಸಿದ ನಂತರ ಮಾಸಿಕ ತಲಾ 25,000/– (ರೂಪಾಯಿ ಇಪ್ಪತ್ತೈದು ಸಾವಿರ ಮಾತ್ರ) ಶುಲ್ಕವನ್ನು ಖಜಾನೆ ಇಲಾಖೆಯ ಲೆಕ್ಕ ಶೀರ್ಷಿಕೆ '2054–00–095–0–01–125 (ಆಧುನೀಕರಣ)' ಅಡಿಯಲ್ಲಿ ಪಾವತಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

| ಕ್ರ. ಸಂ. | ಹೆಸರು |
|---|---|
| 1. | ಶ್ರೀ ಟಿ.ಎನ್ ನಾಗರಾಜನ್<br>ನಿವೃತ್ತ ಹಿರಿಯ ಲೆಕ್ಕಾಧಿಕಾರಿ, ಮಹಾಲೇಖಪಾಲರ ಕಛೇರಿ |
| 2. | ಶ್ರೀ ಸಿ.ಎಂ. ರಘೋತ್ತಮ<br>ನಿವೃತ್ತ ಹಿರಿಯ ಲೆಕ್ಕಾಧಿಕಾರಿ, ಮಹಾಲೇಖಪಾಲರ ಕಛೇರಿ |
| 3. | ಶ್ರೀ ಕೆ. ವಾದಿರಾಜ್<br>ನಿವೃತ್ತ ಹಿರಿಯ ಲೆಕ್ಕಾಧಿಕಾರಿ, ಮಹಾಲೇಖಪಾಲರ ಕಛೇರಿ |
| 4. | ಶ್ರೀ ಕೆ.ವಿ. ವೆಂಕಟೇಶ್<br>ನಿವೃತ್ತ ಜಿಲ್ಲಾ ಖಜಾನಾಧಿಕಾರಿ |

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಪತ್ರದಲ್ಲಿ ಮಹಾಲೇಖಪಾಲರ ಕಛೇರಿ (ಆಡಿಟ್)ಯಲ್ಲಿ ಹಿರಿಯ ಸೂಪರ್‌ವೈಸರ್ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸಿ ನಿವೃತ್ತರಾಗಿರುವ ಶ್ರೀ ಸಿ.ಕೆ. ಅನಂತನಾರಾಯಣ ರವರನ್ನು ದಿನಾಂಕ : 01–01–2012 ರಿಂದ 3 ತಿಂಗಳ ಅವಧಿಗೆ ಸಮಾಲೋಚಕರುಗಳ ತಂಡದ ಜೊತೆಯಲ್ಲಿ ಕಾರ್ಯನಿರ್ವಹಿಸಲು ಮತ್ತು ಮಾಸಿಕ 20,000/– ಶುಲ್ಕ ಪಾವತಿಸಲು ಅನುಮತಿ ನೀಡಲಾಗಿದೆ.

ಈ ಸಮಾಲೋಚಕರುಗಳಿಗೆ ಇನ್ನು ಮುಂದೆ ಪಿಂಚಣಿ, ಸಣ್ಣ ಉಳಿತಾಯ ಮತ್ತು ಆಸ್ತಿ–ಋಣ ನಿರ್ವಹಣೆ ಇಲಾಖೆಯ ಲೆಕ್ಕ ಶೀರ್ಷಿಕೆಯಡಿ ಶುಲ್ಕವನ್ನು ಪಾವತಿಸಲು ಸರ್ಕಾರದ ಆದೇಶ ಸಂಖ್ಯೆ : ಆಇ 27307 ಮುಂಗಡ 2011, ದಿನಾಂಕ : 13–12–2011ನ್ನು ತಕ್ಷಣದಿಂದ ಜಾರಿಗೆ ಬರುವಂತೆ ಮಾರ್ಪಡಿಸಿ ಪರಿಷ್ಕೃತ ಸರ್ಕಾರಿ ಆದೇಶವನ್ನು ಹೊರಡಿಸುವುದು ಸೂಕ್ತವೆಂದು ಭಾವಿಸಿ ಸರ್ಕಾರ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆಇ 27307 ಮುಂಗಡ 2011, ಬೆಂಗಳೂರು, ದಿನಾಂಕ : 12–01–2012**

ರಾಜ್ಯ ಸರ್ಕಾರದ ಆಸ್ತಿ–ಋಣ ನಿರ್ವಹಣೆಗಾಗಿ ಖಜಾನೆ–II ಯೋಜನೆಯಡಿ ಡಾಟಾಬೇಸ್ ಸಿದ್ಧಪಡಿಸುವ ಮತ್ತು ಆರ್ಥಿಕ ಲೆಕ್ಕಗಳಲ್ಲಿ ಬಾಕಿ ಮೊತ್ತಗಳೆಂದು ತೋರಿಸಲಾದ ಅಂಕಿ–ಅಂಶಗಳ ಹೊಂದಾಣಿಕೆ ಕಾರ್ಯದಲ್ಲಿ ಸರ್ಕಾರಕ್ಕೆ ನೆರವಾಗಲು ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಈಗಾಗಲೇ ಸಮಾಲೋಚಕರಾಗಿ ಕಾರ್ಯ ನಿರ್ವಹಿಸುತ್ತಿರುವ ನಾಲ್ಕು ಸಮಾಲೋಚಕರುಗಳ ಜೊತೆಗೆ ಶ್ರೀ ಸಿ.ಕೆ. ಅನಂತನಾರಾಯಣ, ನಿವೃತ್ತ ಹಿರಿಯ ಸೂಪರ್‌ವೈಸರ್, ಮಹಾಲೇಖಪಾಲರ ಕಛೇರಿ (ಆಡಿಟ್), ಇವರಿಗೆ ಮಾಸಿಕ 20,000/– (ಇಪ್ಪತ್ತು ಸಾವಿರ ರೂಪಾಯಿ ಮಾತ್ರ) ಸಮಾಲೋಚನಾ ಶುಲ್ಕ ಪಾವತಿ ಮಾಡಲು ಅನುಮೋದನೆ ನೀಡಲಾಗಿದೆ.

ಡಿಸೆಂಬರ್ 2011 ರಿಂದ ಉಳಿದ ನಾಲ್ಕು ತಿಂಗಳ ಅವಧಿಗೆ ಎಲ್ಲಾ ಐದು ಸಮಾಲೋಚಕರುಗಳಿಗೆ ಸಮಾಲೋಚನಾ ಶುಲ್ಕವನ್ನು ಲೆಕ್ಕ ಶೀರ್ಷಿಕೆ '2047–00–103–0–01–051 ಸಾಮಾನ್ಯ ವೆಚ್ಚಗಳು' ಅಡಿಯಲ್ಲಿ ಭರಿಸತಕ್ಕದ್ದು. ಸರ್ಕಾರದ ಆದೇಶ ಸಂ. ಆಇ 27307 ಮುಂಗಡ 2011, ದಿನಾಂಕ : 13–12–2011ನ್ನು ತಕ್ಷಣದಿಂದ ಜಾರಿಗೆ ಬರುವಂತೆ ಮಾರ್ಪಡಿಸಲಾಗಿದೆ ಮತ್ತು ಇದೇ ಆದೇಶದಲ್ಲಿ ಸಮಾಲೋಚನಾ ಶುಲ್ಕ ಪಾವತಿಗಿರುವ ನಿಬಂಧನೆಗಳಲ್ಲಿ ಯಾವುದೇ ಬದಲಾವಣೆಗಳಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಡಿ.ಜಿ. ಪಟಗಾರ್**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ)
ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡಗಳು)

ಪಿ.ಆರ್. 442

## ಆರ್ಥಿಕ ಸಚಿವಾಲಯ

**ವಿಷಯ :** ಖಜಾನೆ ಯೋಜನೆ–II ಕಾರ್ಯ ಸಂಬಂಧ ಕರ್ನಾಟಕ ಇನ್ಸ್‌ಟಿಟ್ಯೂಟ್ ಆಫ್ ಪಬ್ಲಿಕ್ ಆಡಿಟರ್ಸ್ ಸಂಸ್ಥೆಗೆ ಮುಂಗಡ ಪಾವತಿಸುವ ಬಗ್ಗೆ.

**ಓದಲಾಗಿದೆ :**
1. ಪತ್ರ ಸಂಖ್ಯೆ : ಎಫ್‌ಡಿ 5 ಎಸ್‌ಓಎಫ್‌ಸಿ–1/2011, ದಿನಾಂಕ : 27–08–2011.
2. ಅಧಿಸೂಚನೆ ಸಂಖ್ಯೆ : ಆಇ 766 ವೆಚ್ಚ–12/11, ದಿನಾಂಕ : 22–09–2011.
3. ಸರ್ಕಾರದ ಆದೇಶ ಸಂಖ್ಯೆ ಆಇ165 ಆಖಇ 2011, ದಿನಾಂಕ : 13–10–2011.
4. ಅಧ್ಯಕ್ಷರು, ಕರ್ನಾಟಕ ಇನ್ಸ್‌ಟಿಟ್ಯೂಟ್ ಆಫ್ ಪಬ್ಲಿಕ್ ಆಡಿಟರ್ಸ್, ಬೆಂಗಳೂರು ಅವರ ಪತ್ರ ಸಂಖ್ಯೆ : ಕೆಐಪಿಎ/ಖಜಾನೆ–II/2011–12, ದಿನಾಂಕ : 19–09–2011 ಮತ್ತು 06–01–2012.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ : 27–08–2011ರ ಪತ್ರದಲ್ಲಿ ಬೆಂಗಳೂರಿನ ಕರ್ನಾಟಕ ಇನ್ಸ್‌ಟಿಟ್ಯೂಟ್ ಆಫ್ ಪಬ್ಲಿಕ್ ಆಡಿಟರ್ಸ್ ಸಂಸ್ಥೆ ಸಲ್ಲಿಸಿದ ಪ್ರಸ್ತಾವನೆಯನ್ನು ಒಪ್ಪಿ ಖಜಾನೆ–II ಯೋಜನೆ ಸಂಬಂಧ Domain expert ಕಾರ್ಯವನ್ನು ವಹಿಸಲಾಗಿತ್ತು. ಸದರಿ ಕಾರ್ಯ

ನಿರ್ವಹಿಸಿರುವುದಕ್ಕೆ ಕರ್ನಾಟಕ ಇನ್ಸ್‌ಟಿಟ್ಯೂಟ್ ಆಫ್ ಪಬ್ಲಿಕ್ ಆಡಿಟರ್ಸ್, ಬೆಂಗಳೂರು ಇವರ ಕೋರಿಕೆಯಂತೆ ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಆದೇಶದಲ್ಲಿ ರೂ. 1.00 ಲಕ್ಷಗಳ ಮುಂಗಡ/ಭಾಗಶಃ ಮೊತ್ತವನ್ನು ಪಾವತಿಸಲಾಗಿದೆ. ಉಳಿದ ಮೊತ್ತ ರೂ. 1,49,278/–ಗಳನ್ನು ಪಾವತಿಸುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ದಿನಾಂಕ : –6–01–2012ರ ಪತ್ರದಲ್ಲಿ ಕೋರಿರುತ್ತಾರೆ. ಇದನ್ನು ಪರಿಶೀಲಿಸಿದ ಸರ್ಕಾರ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಆಇ 165 ಆಖಇ 2011, ಬೆಂಗಳೂರು, ದಿನಾಂಕ : 16–01–2012**

ನಿರ್ದೇಶಕರು, ಖಜಾನೆ ಇಲಾಖೆ ರವರು ಖಜಾನೆ–II ಯೋಜನೆ ಸಂಬಂಧ Domain expert ಕಾರ್ಯವನ್ನು ನಿರ್ವಹಿಸಿದ ಕರ್ನಾಟಕ ಇನ್ಸ್‌ಟಿಟ್ಯೂಟ್ ಆಫ್ ಪಬ್ಲಿಕ್ ಆಡಿಟರ್ಸ್, ಬೆಂಗಳೂರು ಸಂಸ್ಥೆಗೆ ಬಾಕಿ ಇರುವ ಉಳಿದ ಮೊತ್ತ ರೂ. 1,49,278/–ಗಳನ್ನು ಪಾವತಿಸಲು ಈ ಮೂಲಕ ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಈ ಸಂಬಂಧ ತಗಲುವ ವೆಚ್ಚವನ್ನು 2011–12ರ ಆಯವ್ಯಯ ಲೆಕ್ಕ ಶೀರ್ಷಿಕೆ 2054–00–095–001–125 (ಆಧುನೀಕರಣ) ರಲ್ಲಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಡಿ.ಜಿ. ಪಟಗಾರ**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ)
ಆರ್ಥಿಕ ಇಲಾಖೆ (ಆಡಳಿತ & ಮುಂಗಡ)

ಪಿ.ಆರ್. 443

## ಆರ್ಥಿಕ ಸಚಿವಾಲಯ

**ವಿಷಯ :** ಶ್ರೀಮತಿ ಬಿ. ಮಧುಮತಿ, ವಾಣಿಜ್ಯ ತೆರಿಗೆ ಉಪ ಆಯುಕ್ತರು, ಇವರನ್ನು ಸರ್ಕಾರಿ ಸೇವೆಯಿಂದ ವಜಾ ಮಾಡುವ ಬಗ್ಗೆ.

**ಓದಲಾಗಿದೆ :**
1. ಅಡಿಷನಲ್ ಡೈರೆಕ್ಟರ್ ಜನರಲ್ ಆಫ್ ಪೊಲೀಸ್, ನಾಗರೀಕ ಹಕ್ಕು ಜಾರಿ ನಿರ್ದೇಶನಾಲಯ, ಬೆಂಗಳೂರು ರವರ ಪತ್ರ ಸಂಖ್ಯೆ : ಜಾವಿ/20/ಬಿಸಿ/ಬಿಡಿ/ನಾಹಜಾನಿ/2003 ದಿನಾಂಕ : 07–11–2008.
2. ವಾಣಿಜ್ಯ ತೆರಿಗೆ ಆಯುಕ್ತರ ಪತ್ರ ಸಂಖ್ಯೆ : ವಿಸಿಆರ್/ಜಿಎಜಡ್/ಸಿಆರ್–35/2008–2009 ದಿನಾಂಕ : 27–11–2008.

**ಪ್ರಸ್ತಾವನೆ :**

ಮೇಲೆ ಓದಲಾಗಿರುವ ಕ್ರಮ ಸಂಖ್ಯೆ (1)ರ ಅಡಿಷನಲ್ ಡೈರೆಕ್ಟರ್ ಜನರಲ್ ಆಫ್ ಪೊಲೀಸ್, ನಾಗರೀಕ ಹಕ್ಕು ಜಾರಿ ನಿರ್ದೇಶನಾಲಯ, ಬೆಂಗಳೂರು ರವರ ಪತ್ರದಲ್ಲಿ ಸುಳ್ಳು ಜಾತಿ ಪ್ರಮಾಣ ಪತ್ರ ನೀಡಿ ಪರಿಶಿಷ್ಟ ಜಾತಿಯ ಮೀಸಲಾತಿ ಅಡಿಯಲ್ಲಿ ನೌಕರಿ ಪಡೆದಿರುವ ಶ್ರೀಮತಿ ಬಿ. ಮಧುಮತಿ, ಪ್ರಸ್ತುತ ವಾಣಿಜ್ಯ ತೆರಿಗೆ ಉಪ ಆಯುಕ್ತರು, ಬೆಂಗಳೂರು, ಇವರನ್ನು ಸರ್ಕಾರಿ ಸೇವೆಯಿಂದ ವಜಾಗೊಳಿಸಲು ಕೋರಿ ವಾಣಿಜ್ಯ ತೆರಿಗೆ ಆಯುಕ್ತರಿಗೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಈ ಬಗ್ಗೆ ವಿಚಾರಣೆಯಿಂದ ಕಂಡುಬಂದ ಸತ್ಯಾಂಶಗಳ ಪ್ರಕಾರ ಪರ್ಸೋನಲ್–I, ವಾಣಿಜ್ಯ ತೆರಿಗೆ ಆಯುಕ್ತರ ಕಛೇರಿ, ಬೆಂಗಳೂರು, ಇಲ್ಲಿ ವಾಣಿಜ್ಯ ತೆರಿಗೆ ಉಪ ಆಯುಕ್ತರಾಗಿರುವ ಶ್ರೀಮತಿ ಮಧುಮತಿರವರು 'ಹಿಂದೂ ಕೋಟೆಯಾರ್' ಜನಾಂಗಕ್ಕೆ ಸೇರಿದ್ದು, ಸುಳ್ಳು ಜಾತಿ ಪ್ರಮಾಣ ಪತ್ರ ಸಲ್ಲಿಸಿರುವ ಬಗ್ಗೆ ಹಲಸೂರು ಗೇಟ್ ಪೊಲೀಸ್ ಠಾಣೆಯಲ್ಲಿ ಭಾರತೀಯ ದಂಡ ಸಂಹಿತೆ ಕಲಂ 192, 196 ಮತ್ತು 420ರ ರೀತ್ಯ ಮೊಕದ್ದಮೆ ಸಂಖ್ಯೆ : 329/2008ರ ಕಲಂ 3ರ ಕ್ಲಾಸ್ (1) ಸಬ್ ಕ್ಲಾಸ್ (9) ಎಸ್.ಸಿ./ಎಸ್.ಟಿ./(ಪಿಎ)1989ರ ಅಡಿಯಲ್ಲಿ ಪ್ರಕರಣ ದಾಖಲು ಮಾಡಿಕೊಂಡಿದ್ದು, ತನಿಖೆಯಲ್ಲಿ ಅಧಿಕಾರಿಯವರು ನೀಡಿರುವ 'ಕೋಟೆಗಾರ್' ಪರಿಶಿಷ್ಟ ಜಾತಿ ಪ್ರಮಾಣ ಪತ್ರವು ಸುಳ್ಳೆಂದು ಜಿಲ್ಲಾಧಿಕಾರಿಗಳು ಹಾಗೂ ಅಧ್ಯಕ್ಷರು, ಜಿಲ್ಲಾ ಮಟ್ಟದ ಜಾತಿ ಪರಿಶೀಲನಾ ಸಮಿತಿ ಬೆಂಗಳೂರು ನಗರ ಜಿಲ್ಲೆ ಇವರ ಆದೇಶದ ದಿನಾಂಕ : 17–06–2004ರ ಮೇರೆಗೆ ಶ್ರೀಮತಿ ಬಿ. ಮಧುಮತಿ, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, ಇವರು ಪರಿಶಿಷ್ಟ ಜಾತಿ "ಕೋಟೆಗಾರ್" ಜಾತಿ ಪ್ರಮಾಣ ಪತ್ರ ನೀಡಿದ್ದು, ದಿನಾಂಕ : 29–03–2003ರ ರೀತ್ಯ ಇವರಿಗೆ ಪರಿಶಿಷ್ಟ ಜಾತಿಯ ಮೀಸಲಾತಿಯಡಿಯಲ್ಲಿ ಯಾವುದೇ ಸೌಲಭ್ಯವನ್ನು ನೀಡಬಾರದೆಂದು "ಹಿಂದೂ ಕೋಟೆಯಾರ್" ಸಾಮಾನ್ಯ ಜಾತಿಯಲ್ಲಿ ಮುಂದುವರೆಯಲು ಆದೇಶಿಸಿರುತ್ತಾರೆ.

ನಾಗರೀಕ ಹಕ್ಕು ಜಾರಿ ನಿರ್ದೇಶನಾಲಯದ ಹೆಚ್ಚುವರಿ ಡಿ.ಜಿ.ಪಿ.ರವರು ಇವರ ಜಾತಿ ಪ್ರಮಾಣ ಪತ್ರದ ಬಗ್ಗೆ ತನಿಖೆ ನಡೆಸಿದ್ದು, ಶ್ರೀಮತಿ ಬಿ.ಮಧುಮತಿ, ಪ್ರಸ್ತುತ ವಾಣಿಜ್ಯ ತೆರಿಗೆ ಉಪ ಆಯುಕ್ತರು, ಇವರು ಮೂಲತಃ "ಹಿಂದೂ ಕೋಟೆಯಾರ್" ಜಾತಿಗೆ ಸೇರಿದವರಾಗಿದ್ದು, ಇವರು 1991–92ನೇ ಸಾಲಿನಲ್ಲಿ 'ಕೋಟೆಗಾರ್' ಎಂದು ಸುಳ್ಳು ಜಾತಿ ಪ್ರಮಾಣ ಪತ್ರವನ್ನು ಹಾಜರುಪಡಿಸಿ, 1985ನೇ ಸಾಲಿನಲ್ಲಿ ಪರಿಶಿಷ್ಟ ಜಾತಿ/ವರ್ಗದ ವಿಶೇಷ ನೇಮಕಾತಿಯಡಿಯಲ್ಲಿ ಗ್ರೂಪ–ಎ ಹುದ್ದೆಗೆ ಅರ್ಜಿ ಸಲ್ಲಿಸಿ, ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕು ಇವರಿಗೆ ಸುಳ್ಳು ಮಾಹಿತಿ ನೀಡಿ, 1991–92ನೇ ಸಾಲಿನಲ್ಲಿ "ಕೋಟೆಗಾರ್" ಪರಿಶಿಷ್ಟ ಜಾತಿ ಪ್ರಮಾಣ ಪತ್ರ ಪಡೆದು, ಹಾಜರುಪಡಿಸಿ ದಿನಾಂಕ : 16–01–1991ನೇ ಸಾಲಿನಲ್ಲಿ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರಾಗಿ ಪರಿಶಿಷ್ಟ ಜಾತಿಗೆ ಮೀಸಲಾಗಿರುವ ಗ್ರೂಪ್–ಎ ಹುದ್ದೆಗೆ ನೇಮಕವಾಗಿರುತ್ತಾರೆ ಎಂದು ತಿಳಿಸಿರುತ್ತಾರೆ.

ನಾಗರೀಕ ಹಕ್ಕು ಜಾರಿ ನಿರ್ದೇಶನಾಲಯದ ಹೆಚ್ಚುವರಿ ಡಿ.ಜಿ.ಪಿ ರವರು ಸರ್ವೋಚ್ಚ ನ್ಯಾಯಾಲಯದ ತೀರ್ಪನ್ನು ಉಲ್ಲೇಖಿಸಿ, ಶ್ರೀಮತಿ ಬಿ. ಮಧುಮತಿರವರನ್ನು ಕೂಡಲೇ ಕೆಲಸದಿಂದ ವಜಾ ಮಾಡುವಂತೆ ಸೂಚಿಸಿರುತ್ತಾರೆ. ಹೆಚ್ಚುವರಿ ಡಿ.ಜಿ.ಪಿ. ರವರು ಉಲ್ಲೇಖಿಸಿರುವ ಸರ್ವೋಚ್ಚ ನ್ಯಾಯಾಲಯದ ತೀರ್ಪಿನ ಉದ್ಧೃತ ಭಾಗವು ಈ ಕೆಳಕಂಡಶಿದೆ :

"A person procuring appointment in a post meant for reserved category candidate, on the basis of false caste certificate, held, in not a person holding civil post with in the meaning of article 311 such appointment, held, is no appointment in the eye of the law. Hence dismissal of a person so appointed, held does not attract article 311".

ಭಾರತ ಸರ್ವೋಚ್ಚ ನ್ಯಾಯಾಲಯದ ಸಿವಿಲ್ ಅಪೀಲು ಸಂಖ್ಯೆ : 4636/2008ರ ಮಧುಲಿಕ ಗುರುಪ್ರಸಾದ ಧಾಹಿರ್ ಮತ್ತು ಇತರರು ಪ್ರಕರಣದಲ್ಲಿ ದಿನಾಂಕ : 27–05–2008 ರಂದು ನೀಡಿರುವ ತೀರ್ಪಿನ ಅನುಸಾರ ಯಾವುದೇ ನೋಟೀಸನ್ನು ನೀಡದೇ ನೇಮಕಾತಿಯನ್ನು ರದ್ದು ಮಾಡತಕ್ಕದ್ದು ಮತ್ತು ಯಾವುದೇ ಹುದ್ದೆಯಲ್ಲಿ ಮುಂದುವರೆಸತಕ್ಕದ್ದಲ್ಲ ಎಂದು ತಿಳಿಸಲಾಗಿದೆ. ಅದರ ಉದ್ಧೃತ ಭಾಗ ಈ ಕೆಳಕಂಡಂತೆ ಇರುತ್ತದೆ.

"as soon as the finding is recorded by the the scrutiny committee holding that the certificate obtained was false on its cancellation and confiscation simultaneously, it should be communicated to the educational institution concerned, or the appointing

authority with a request to cancel the admission on the appointment thereon, the admission or appointment shall be cancelled without any further notice to the candidate and the candidate shall be debarred from further study or continue in office in a post".

ಶ್ರೀಮತಿ ಬಿ.ಮಧುಮತಿ, ಪ್ರಸ್ತುತ ವಾಣಿಜ್ಯ ತೆರಿಗೆ ಉಪ ಆಯುಕ್ತರು ಮತ್ತು ಇತರರು ಕರ್ನಾಟಕ ಉಚ್ಛ ನ್ಯಾಯಾಲಯದಲ್ಲಿ ಸಲ್ಲಿಸಿದ ರಿಟ್ ಅರ್ಜಿ ಸಂಖ್ಯೆ : 15034/2008ನ್ನು ವಾಪಸ್ಸ್ ಪಡೆದಿರುವ ಕಾರಣ ದಿನಾಂಕ : 08–04–2011ರ ಆದೇಶದಲ್ಲಿ ರಿಟ್ ಅರ್ಜಿಯನ್ನು ವಜಾ ಮಾಡಲಾಗಿದೆ.

ನಾಗರೀಕ ಹಕ್ಕು ಜಾರಿ ನಿರ್ದೇಶನಾಲಯದ ತನಿಖೆಯಿಂದ ಶ್ರೀಮತಿ ಬಿ. ಮಧುಮತಿರವರು ಸುಳ್ಳು ಜಾತಿ ಪ್ರಮಾಣ ಪತ್ರ ನೀಡಿ, ಪರಿಶಿಷ್ಟ ಜಾತಿಗೆ ಮೀಸಲಾಗಿದ್ದ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರ ಹುದ್ದೆಗೆ ನೇಮಕಗೊಂಡಿರುವುದು ಸಾಬೀತಾಗಿರುವುದರಿಂದ ಮೇಲೆ ಉಲ್ಲೇಖಿಸಿದ ಸರ್ವೋಚ್ಛ ನ್ಯಾಯಾಲಯದ ತೀರ್ಪಿನನ್ವಯ ಸರ್ಕಾರವು ಪರಿಶೀಲಿಸಿ, ಶ್ರೀಮತಿ ಬಿ. ಮಧುಮತಿ ಇವರನ್ನು ಸೇವೆಯಲ್ಲಿ ಮುಂದುವರೆಸುವುದು ಸೂಕ್ತವಲ್ಲವೆಂದು ತೀರ್ಮಾನಿಸಿ ಅವರನ್ನು ತಕ್ಷಣ ಸರ್ಕಾರಿ ಸೇವೆಯಿಂದ ವಜಾ ಮಾಡುವುದು ಸೂಕ್ತವೆಂದು ಪರಿಗಣಿಸಿ ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆಇ 79 ವಾತೆತ 2008, ಬೆಂಗಳೂರು, ದಿನಾಂಕ : 25–01–2012**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಶಿಸ್ತುಪ್ರಾಧಿಕಾರವಾದ ಸರ್ಕಾರವು, ಶ್ರೀಮತಿ ಬಿ.ಮಧುಮತಿ, ಪ್ರಸ್ತುತ ವಾಣಿಜ್ಯ ತೆರಿಗೆ ಉಪ ಆಯುಕ್ತರು (ಪರ್ಸೋನಲ್–I), ವಾಣಿಜ್ಯ ತೆರಿಗೆ ಆಯುಕ್ತರ ಕಛೇರಿ, ವಾಣಿಜ್ಯ ತೆರಿಗೆ ಇಲಾಖೆ, ಬೆಂಗಳೂರು, ಇವರನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ.ಆರ್. ಚಂದ್ರಶೇಖರಾರಾಧ್ಯ**
ಪೀಠಾಧಿಕಾರಿ
ಪಿ.ಆರ್. 444 ಆರ್ಥಿಕ ಇಲಾಖೆ (ವಾಣಿಜ್ಯ ತೆರಿಗೆ–2)

## INFORMATION TECHNOLOGY, BIOTECHNOLOGY AND SCIENCE AND TECHNOLOGY SECRETRIAT

**Sub:** Withdrawl of approval of the project proposal of M/s OPTO Circuits (India) Limited to establish "SEZ Electronics Hardware Projects and Transfer of approval from M/s Opto Circuits (India) Limited to M/s Opto Infrastructure Ltd.

**Read :**
1. Government Order No. ITD 34 MDA 2007(1) dated : 04-03-2008.
2. Government Order No. ITD 08 MDA 2008 (37) dated : 27-05-2008.
3. Proceedings of 26th State High Level Clearance Committee (SHLCC) meeting held on 09-11-2011.
4. Letter No. CI/286/SPI/2011, dated : 17-12-2011 of Director (Technical Cell) Commerce and Industries department, Bangalore.

**Preamble:**

In the Government Order read at (1) above, approval was accorded to M/s Opto Circuits (India) Ltd., to establish SEZ for Electronics Hardware Sector at Pharma SEZ, Hassan in 250 acres of land in KIADB Industrial area at Hassan.

In the Government Order read at (2) above, Government was accorded approval to transfer of approval from M/s Opto Circuits (India) Ltd., to M/s Opto Infrastructure Ltd. and to include IT and ITES activities to SEZ for Electronic Hardware Project activity.

In the Proceedings read at (3) it states that, again the company is seeking SHLCC approval for change of activity to manufacturing of Equipments, Devices, Accessories including Consumables for medical and other applications. Instead of SEZ, for Electronic Hardware, IT and ITES approved earlier.

The committee approved for change of activity from "SEZ for Electronic Hardware and IT/ITES to manufacturing equipment, Devices, Accessories including Consumables for Medical and other applications - SEZ". The project proponent to comply with the norms under SEZ.

1. In the letter read at (4) Director, technical cell, Commerce and Industries Departments requested to issue amended G.O. from Information technology, Bio-technology and Science and technology department. But the change of activity is not pertains to Information technology, Bio-technology and Science and technology department.

This proposal has been examined. Government is pleased to withdraw the Orders. Hence this Order.

**Government Order No. ITD 55 MDA 2011, Bangalore, Dated: 23rd January 2012**

In the circumstances explained in the Preamble, Government are pleased to withdraw the Government Orders (1) ITD 34 MDA 2007 (1) dated : 04-03-2008 and (2) ITD 08 MDA 2008 (37) dated : 27-05-2008.

By Order and in the Name of the Governor of Karnataka
**E. Ramakrishnappa**
Under Secretary to Government
PR. No. 445 Department of Information Technology, Biotechnology and Science & Technology

## INFORMATION TECHNOLOGY, BIO TECHNOLOGY AND SCIENCE & TECHNOLOGY SECRETARIAT

**ADDENDUM**

**Sub :** Constitution of Selection Committee for BT Finishing School.

**No. ITD 18 MDA 2011, Bangalore Dated: 24-01-2012**

In the order portion of Government Order No: ITD 01 MDA 2010 Dated: 27-05-2010 after Sl No: 6 the following shall be inserted.

7) Smt. Ramya S.
General Manager (F & A),
KBITS
Member

By Order and in the name of the Governor of Karnataka,

**S. Raju**

Deputy Secretary to Government

Department of Information Technology,

Bio Technology and Science & Technology

PR. 446

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಹೈದ್ರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿಗೆ 2011–2012 ನೇ ಸಾಲಿನ ಮೂರನೇ ಕಂತಿನ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಯೋಇ 25 ಹೈಕಮಂ 2011, ದಿನಾಂಕ: 20.05.2011.
2. ಸರ್ಕಾರದ ಆದೇಶ ಸಂಖ್ಯೆ: ಯೋಇ 25 ಹೈಕಮಂ 2011, ದಿನಾಂಕ: 20.09.2011.
3. ಪತ್ರ ಸಂಖ್ಯೆ: ಹೈಕಪ್ರಮಂ/ಹನಿ/ಎಸಿ–1/2011–12, ದಿನಾಂಕ: 24.11.2011.

**ಪ್ರಸ್ತಾವನೆ :**

2011–12ನೇ ಸಾಲಿನಲ್ಲಿ ಹೈದ್ರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿಗೆ ಲೆಕ್ಕಶೀರ್ಷಿಕೆ "2515–00–800–0–01 (ಯೋಜನೆ)" ಅಡಿಯಲ್ಲಿ ರೂ. 130.00 ಲಕ್ಷಗಳನ್ನು ಹಾಗೂ 4515–0–800–0–01 ಅಡಿಯಲ್ಲಿ ರೂ. 4370.00 ಲಕ್ಷಗಳನ್ನು ಒದಗಿಸಲಾಗಿದೆ ಮೇಲೆ ಓದಲಾದ (1) ಮತ್ತು (2) ರಲ್ಲಿನ ಸರ್ಕಾರದ ಆದೇಶದಲ್ಲಿ ಮೊದಲನೇ ಹಾಗೂ ಎರಡನೇ ಕಂತಾಗಿ ಒಟ್ಟು ರೂ. 2250.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ. ಮೇಲೆ ಓದಲಾದ (3) ರ ಪತ್ರದಲ್ಲಿ ಕಾರ್ಯದರ್ಶಿ ಹೈದ್ರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿ ಇವರು ಮೂರನೇ ಕಂತನ್ನು ಬಿಡುಗಡೆ ಮಾಡಲು ಕೋರಿರುವ ಹಿನ್ನೆಲೆಯಲ್ಲಿ ಮಂಡಳಿಗೆ ಮೂರನೇ ಕಂತಾಗಿ ರೂ. 1125.00 ಲಕ್ಷಗಳನ್ನು ಬಿಡುಗಡೆ ಮಾಡಲು ಉದ್ದೇಶಿಸಲಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಯೋಇ, 25 ಹೈಕಮಂ 2011, ಬೆಂಗಳೂರು, ದಿನಾಂಕ: 27ನೇ ಡಿಸೆಂಬರ್ 2011**

2011–12ನೇ ಸಾಲಿನಲ್ಲಿ ಹೈದ್ರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿಗೆ ಆಡಳಿತ ವೆಚ್ಚಗಳಿಗಾಗಿ ಲೆಕ್ಕಶೀರ್ಷಿಕೆ "2515–00–800–0–01–101–(ಸಹಾಯಾನುದಾನ)" ಅಡಿಯಲ್ಲಿ ರೂ. 40.00 ಲಕ್ಷಗಳನ್ನು (ನಲವತ್ತು ಲಕ್ಷಗಳು ಮಾತ್ರ) ಬಂಡವಾಳ ವೆಚ್ಚಗಳಿಗಾಗಿ ಲೆಕ್ಕಶೀರ್ಷಿಕೆ "4515–00–800–0–01–132" ಅಡಿ ರೂ. 835.00 ಲಕ್ಷಗಳನ್ನು (ಎಂಟುನೂರಾ ಮೂವತ್ತೈದು ಲಕ್ಷಗಳು ಮಾತ್ರ) ವಿಶೇಷ ಘಟಕ ಯೋಜನೆಯಡಿ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲು ಲೆಕ್ಕಶೀರ್ಷಿಕೆ "4515–00–800–0–01–422" ಅಡಿಯಲ್ಲಿ ರೂ. 175.00 ಲಕ್ಷಗಳನ್ನು (ಒಂದು ನೂರ ಎಪ್ಪತ್ತೈದು ಲಕ್ಷಗಳು ಮಾತ್ರ) ಹಾಗೂ ಗಿರಿಜನ ಉಪಯೋಜನೆಯಡಿ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲು ಲೆಕ್ಕಶೀರ್ಷಿಕೆ "4515–00–800–0–01–423" ಅಡಿಯಲ್ಲಿ ರೂ. 75.00 ಲಕ್ಷಗಳು (ರೂ. ಎಪ್ಪತ್ತೈದು ಲಕ್ಷಗಳು ಮಾತ್ರ) ಒಟ್ಟು ರೂ. 1125.00 ಲಕ್ಷಗಳನ್ನು (ಹನ್ನೊಂದು ಕೋಟಿ ಇಪ್ಪತ್ತೈದು ಲಕ್ಷಗಳು ಮಾತ್ರ) ಬಿಡುಗಡೆ ಮಾಡಲಾಗಿದೆ.

2) ಬಿಡುಗಡೆಯಾದ ಮೊತ್ತವನ್ನು ಮಂಡಳಿಯ ವೈಯಕ್ತಿಕ ಖಾತೆಯಲ್ಲಿ ಮೊದಲು ಇಟ್ಟು ನಂತರ ಕಾರ್ಯಕ್ರಮದ ಅನುಗುಣವಾಗಿ ಖರ್ಚು ಮಾಡತಕ್ಕದ್ದು. ನಿಯಮಾನುಸಾರ ಹಣ ಬಳಕೆ ದೃಢೀಕರಣ ಪತ್ರವನ್ನು 2011–12ರ ಸಾಲಿನಲ್ಲಿ ಮಂಡಳಿಯ ಕಾರ್ಯದರ್ಶಿಯವರು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ/537/ವೆಚ್ಚ–06/2011, ದಿನಾಂಕ: 17.12.2011ರಲ್ಲಿನ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ಚಿಕ್ಕರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ–1 & 2

ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

ಪಿ.ಆರ್. 447

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ತಿದ್ದುಪಡಿ**

**ಸಂಖ್ಯೆ: ಯೋಇ 15 ಮಪ್ರಮಂ 2011, ಬೆಂಗಳೂರು, ದಿನಾಂಕ: 25–1–2012**

ಸರ್ಕಾರದ ಆದೇಶ ಸಂಖ್ಯೆ: ಯೋಇ 15 ಮಪ್ರಮಂ 2011 ದಿ: 16–1–2012ರಲ್ಲಿ ಲೆಕ್ಕಶೀರ್ಷಿಕೆ "4515–00–80–0–03–132" ಅಡಿಯಲ್ಲಿ ರೂ. 640.00 ಲಕ್ಷ ಎಂಬುದನ್ನು ಬದಲಾಗಿ 625.00 ಲಕ್ಷ ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 448

**ಎಂ.ಜಿ. ಮುಳ ಕೂರ**

ಸರ್ಕಾರದ ಅಧೀನ ಕಾರ್ಯದರ್ಶಿ 1 & 2

ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

## ಸಹಕಾರ ಸಚಿವಾಲಯ

**ವಿಷಯ :** ಕರ್ನಾಟಕ ವಿದ್ಯುಚ್ಛಕ್ತಿ ಮಂಡಳಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಕಲ್ಯಾಣ ಸಂಸ್ಥೆ (ರಿ) ಈ ಸಂಸ್ಥೆಗೆ ಆಡಳಿತಾಧಿಕಾರಿಯನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:** ಸಹಕಾರ ಸಂಘಗಳ ನಿಬಂಧಕರು ಬೆಂಗಳೂರು ಇವರ ಪತ್ರ ಸಂಖ್ಯೆ: ಆರ್‌ಸಿಎಸ್/ಎಡಿಎಂ/117/ಎಸ್‌ಒಆರ್–1/2011–12 ದಿನಾಂಕ 4/10/2011

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ 4/10/2011ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ಬೆಂಗಳೂರು ಇವರು ಕರ್ನಾಟಕ ವಿದ್ಯುಚ್ಛಕ್ತಿ ಮಂಡಳಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಕಲ್ಯಾಣ ಸಂಸ್ಥೆ (ರಿ), ಬೆಂಗಳೂರು ಈ ಸಂಘವು ಸಂಖ್ಯೆ:466/75–76 ರಂತೆ ನೊಂದಣಿಯಾಗಿದ್ದು ಸಂಘದ ಬೈಲಾ ಪ್ರಕಾರ ಸಮಿತಿ ಅವಧಿ 3 ವರ್ಷಗಳಾಗಿರುತ್ತವೆ. ದಿನಾಂಕ 3/2/2008 ರಂದು ಸಮಿತಿಗೆ ಚುನಾವಣೆ ನಡೆದು ದಿನಾಂಕ 31/1/2011ಕ್ಕೆ ಅವಧಿ ಮುಕ್ತಾಯವಾಗಿದ್ದು ಇದುವರೆವಿಗೂ ಚುನಾವಣೇ ನಡೆಸಲು ಯಾವುದೇ ಕ್ರಮ ತೆಗೆದುಕೊಂಡಿರುವುದಿಲ್ಲವೆಂದು ಬೆಂಗಳೂರು ನಗರ ಜಿಲ್ಲೆ, ಸಂಘಗಳ ನೊಂದಣಾಧಿಕಾರಿ, ಕೇಂದ್ರವಲಯ, ಇವರು ವರದಿ ಮಾಡಿರುವುದಾಗಿ ತಿಳಿಸಿರುತ್ತಾರೆ.

ಸಂಘಕ್ಕೆ ಚುನಾವಣೇ ನಡೆಯದೆ ಇರುವುದರಿಂದ ದೂರು ಅರ್ಜಿಗಳು ಬರುತ್ತಿವೆ. ಸಂಘಕ್ಕೆ ಬೈಲಾ ಪ್ರಕಾರ ನಿಗದಿತ ಅವಧಿಯಲ್ಲಿ ಚುನಾವಣೆ ನಡೆಸುವುದು ಅವಶ್ಯಕವಾಗಿದೆ. ಅಲ್ಲದೆ ಮಂಡಳಿ ಚುನಾವಣೆ ನಡೆಸಲು ವಿಫಲರಾಗಿರುವುದರಿಂದ ಸದರಿ ಸಂಘಕ್ಕೆ ಕರ್ನಾಟಕ ಸಂಘಗಳ ನೊಂದಣಿ ಕಾಯ್ದೆ 1960 ರ ಕಲಂ 27 (ಎ) ರನ್ವಯ ಆಡಳಿತಾಧಿಕಾರಿಯನ್ನು ನೇಮಿಸುವುದು ಸೂಕ್ತವೆಂದು ಜಿಲ್ಲಾ ಸಂಘಗಳ ನೊಂದಣಾಧಿಕಾರಿಗಳು, ಕೇಂದ್ರವಲಯ, ಬೆಂಗಳೂರುರವರ ಅಭಿಪ್ರಾಯದ ಶಿಫಾರಸ್ಸನ್ನು ಪರಿಗಣಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ.

ಕರ್ನಾಟಕ ವಿದ್ಯುಚ್ಛಕ್ತಿ ಮಂಡಳಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಕಲ್ಯಾಣ ಸಂಸ್ಥೆಯ ಆಡಳಿತ ಅವಧಿ ಮುಗಿದಿದ್ದು, ಆಡಳಿತ ಮಂಡಳಿಗೆ ಚುನಾವಣೆ ನಡೆಸಲು ವಿಫಲರಾಗಿರುವುದರಿಂದ ಈ ಸಂಸ್ಥೆಯಲ್ಲಿ ಕರ್ನಾಟಕ ಸಂಘಗಳ ನೊಂದಣಿ ಕಾಯ್ದೆ 1960 ಉಲ್ಲಂಘನೆಯಾಗಿರುವುದು ಮೇಲ್ನೋಟಕ್ಕೆ ಕಂಡುಬಂದಿರುವುದರಿಂದ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಇ 04 ಸಸಂನೋ 2012, ಬೆಂಗಳೂರು, ದಿನಾಂಕ: 21ನೇ ಜನವರಿ, 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ವಿದ್ಯುಚ್ಛಕ್ತಿ ಮಂಡಳಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಕಲ್ಯಾಣ ಸಂಸ್ಥೆ (ರಿ) ಬೆಂಗಳೂರು ಈ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 27(ಎ) ರನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸಂಘಗಳ ಜಿಲ್ಲಾ ನೊಂದಣಾಧಿಕಾರಿಗಳು ಕೇಂದ್ರ ವಲಯ, ಮಲ್ಲೇಶ್ವರಂ, ಬೆಂಗಳೂರು ಇವರನ್ನು ಆಡಳಿತಾಧಿಕಾರಿಯಾಗಿ ಆರು (06) ತಿಂಗಳ ಅವಧಿಗೆ ನೇಮಿಸಿ ಆದೇಶಿಸಿದೆ.

ಆಡಳಿತಾಧಿಕಾರಿಗಳು ಸದರಿ ಅವಧಿಯಲ್ಲಿ ಸಂಸ್ಥೆಗೆ ಚುನಾವಣೆ ಪ್ರಕ್ರಿಯೆ ಪೂರ್ಣಗೊಳಿಸಿ, ಹೊಸ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎಸ್. ವಿಶ್ವೇಶ್ವರಯ್ಯ**

449

ಸರ್ಕಾರದ ಅಧೀನ ಕಾರ್ಯದರ್ಶಿ–2

ಸಹಕಾರ ಇಲಾಖೆ

## ಸಹಕಾರ ಸಚಿವಾಲಯ

**ವಿಷಯ :** ಹಣ್ಣು ಮತ್ತು ತರಕಾರಿ (ವಿಶೇಷ) ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ ಬೆಂಗಳೂರು -ಬ್ಯಾಟರಾಯನಪುರ ಉಪ ಮಾರುಕಟ್ಟೆಯಲ್ಲಿ ಸಾರ್ವಜನಿಕ ಖಾಸಗಿ ಸಹಬಾಗಿತ್ವದಲ್ಲಿ (ಪಿ.ಪಿ.ಪಿ.) ಆಧುನಿಕ ಮಾರುಕಟ್ಟೆ ನಿರ್ಮಾಣ ಯೋಜನೆಗೆ ಆಡಳಿತಾತ್ಮಕ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:**
1. ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ಬೆಂಗಳೂರು ಇವರ ಪತ್ರಸಂಖ್ಯೆ: ಕೃಮಾಇ/ಮಾಆಯೋ/ಆಆ-2410/2010-11 ದಿ: 21.10.2010.
2. ಸರ್ಕಾರದ ಪತ್ರ ಸಂಖ್ಯೆ: ಸಇ 322 ಎಂಆರ್‌ಇ 2010 ದಿನಾಂಕ: 4.11.2010
3. ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ಬೆಂಗಳೂರು ಇವರ ಪತ್ರಸಂಖ್ಯೆ: ಕೃಮಾಇ/ಮಾಆಯೋ/ಆಆ-10285/2010-11 ದಿ: 16.12.2010
4. ಸರ್ಕಾರ ಪ್ರಧಾನ ಕಾರ್ಯದರ್ಶಿ ಸಹಕಾರ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ದಿನಾಂಕ: 04.01.2011 ರಂದು ನಡೆದ ಸಭೆಯ ನಡವಳಿಗಳು.
5. ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ಇವರ ಪತ್ರಸಂಖ್ಯೆ: ಕೃಮಾಇ/ಮಾಆಯೋ/ಆಆ/ತಾಂತ್ರಿಕ/11595/2010-11 ದಿ: 24.1.2011
6. ಸರ್ಕಾರದ ಆದೇಶ ಸಂಖ್ಯೆ: ಸಇ 322 ಎಂಆರ್‌ಇ 2010 ದಿನಾಂಕ: 25.1.2011
7. ನಿರ್ದೇಶಕರು ಕೃಷಿ ಮಾರಾಟ ಇಲಾಖೆ ಇವರ ಪತ್ರ ಸಂಖ್ಯೆ: DAM/PAS/42/2011-12 ದಿನಾಂಕ: 18.7.2011

**ಪ್ರಸ್ತಾವನೆ :**

ಕರ್ನಾಟಕ ಕೃಷಿ ಉತ್ಪನ್ನ ಮಾರಾಟ (ನಿಯಂತ್ರಣ ಮತ್ತು ಅಭಿವೃದ್ಧಿ) ಕಾಯ್ದೆ 1966 ಹಾಗೂ ನಿಯಮಗಳು 1968 ರನ್ವಯ ಬೆಂಗಳೂರಿನಲ್ಲಿ 1994 ರಲ್ಲಿ ಸ್ಥಾಪಿಸಲಾದ ಹಣ್ಣು ಮತ್ತು ತರಕಾರಿ (ವಿಶೇಷ) ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಬಿನ್ನಿಪೇಟೆ ಈ ಮಾರುಕಟ್ಟೆಗೆ ರೈತರ ಹಿತ ಕಾಪಾಡಲು ಹಾಗೂ ಹಣ್ಣು ಮತ್ತು ತರಕಾರಿ ವ್ಯಾಪಾರಕ್ಕೆ ಪೂರಕವಾದ ವ್ಯವಸ್ಥಿತ ಸೌಲಭ್ಯವನ್ನು ಕಲ್ಪಿಸಲು ಕಲಾಸಿಪಾಳ್ಯದಲ್ಲಿ ನಡೆಯುತ್ತಿರುವ ತರಕಾರಿ ವ್ಯಾಪಾರವನ್ನು ಬೆಂಗಳೂರು ನಗರ ಕೇಂದ್ರ ಪ್ರದೇಶದ ದಟ್ಟಣೆಯಿಂದ ನಗರದ ಹೊರ ವಲಯಕ್ಕೆ ಸ್ಥಳಾಂತರಿಸಲು 1987 ರಲ್ಲಿ ತರಕಾರಿಗಾಗಿ ಸಗಟು ಮಾರುಕಟ್ಟೆಯನ್ನಾಗಿ ಸ್ಥಾಪಿಸಿ ಉಪ ಮಾರುಕಟ್ಟೆ ಪ್ರಾಂಗಣವಾಗಿ ಅಭಿವೃದ್ಧಿಪಡಿಸಲು 31 ಎಕರೆ ಜಮೀನನ್ನು ಭೂ ಸ್ವಾಧೀನದ ಮೂಲಕ ಪಡೆಯಲಾಗಿದೆ.

ಹಣ್ಣು ಮತ್ತು ತರಕಾರಿ (ವಿಶೇಷ) ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಬಿನ್ನಿಪೇಟೆ ಬೆಂಗಳೂರು ಇದಕ್ಕೆ ಸೇರಿದ ಬ್ಯಾಟರಾಯನಪುರ ಉಪ ಮಾರುಕಟ್ಟೆಯಲ್ಲಿ ಟರ್ನ್ ಕೀ ಆಧಾರದ ಮೇಲೆ ರೂ. 23-00 ಕೋಟಿ ವೆಚ್ಚದಲ್ಲಿ ಆಧುನಿಕ ಸಗಟು ಮಾರುಕಟ್ಟೆ ನಿರ್ಮಿಸಲು ಮೆ॥ ಎನ್.ಡಿ.ಡಿ.ಬಿ ಯೊಂದಿಗೆ ಕರಾರನ್ನು ಮಾಡಿಕೊಳ್ಳಲಾಗಿತ್ತು. ನಂತರ ಸದರಿ ಸಂಸ್ಥೆ ರೂ. 41.00 ಕೋಟಿ ವೆಚ್ಚವಾಗುವುದಾಗಿ ತಿಳಿಸಿದ ಹಿನ್ನೆಲೆಯಲ್ಲಿ ದಿನಾಂಕ: 16.03.2006 ರಂದು ಸರ್ಕಾರದ ಕಾರ್ಯದರ್ಶಿ ಸಹಕಾರ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ತೀರ್ಮಾನಿಸಿದಂತೆ ಸಂಸ್ಥೆಯೊಂದಿಗೆ ಮಾಡಿಕೊಂಡ ಕರಾರನ್ನು ರದ್ದುಪಡಿಸಲಾಯಿತು.

ತದನಂತರ ದಿನಗಳಲ್ಲಿ ಬೆಂಗಳೂರು ಹಣ್ಣು ತರಕಾರಿಗಳ (ವಿಶೇಷ) ಮಾರುಕಟ್ಟೆ ಪ್ರಾಂಗಣದಲ್ಲಿ 400 ಸಗಟು ವ್ಯಾಪಾರಸ್ಥರು ಲೈಸೆನ್ಸ್ ಪಡೆದು ವ್ಯಾಪಾರ ವಹಿವಾಟು ನಡೆಸುತ್ತಿದ್ದು ಆ ಪ್ರದೇಶದ ಜಾಗವು ಕಿರಿದಾಗಿದ್ದು ಇವರಿಗೆಲ್ಲ ಬ್ಯಾಟರಾಯನಪುರದಲ್ಲಿರುವ ಜಾಗದಲ್ಲಿ ಹೊಸ ಮಾರುಕಟ್ಟೆಯನ್ನು ಸ್ಥಾಪಿಸಿ ಮಳಿಗೆಗಳನ್ನು ಹಂಚಿಕೆ ಮಾಡುವ ಬಗ್ಗೆ ಪರಿಶೀಲಿಸಲಾಯಿತು. ಇದಕ್ಕಾಗಿ ತಗಲುವ ವೆಚ್ಚವು ಅತ್ಯಧಿಕವಾಗಿದ್ದು ಸಮಿತಿಯಲ್ಲಿ ಅಷ್ಟೊಂದು ಹಣವು ಇಲ್ಲದೇ ಇರುವುದರಿಂದ ಸಾರ್ವಜನಿಕ ಸಹಬಾಗಿತ್ವದಲ್ಲಿ ಆಧುನಿಕ ಸಗಟು ಮಾರುಕಟ್ಟೆಯನ್ನು ವಿನ್ಯಾಸಗೊಳಿಸಲಾಯಿತು. ಈ ಹಿನ್ನೆಲೆಯಲ್ಲಿ ಪ್ರಥಮವಾಗಿ 2007 ರಲ್ಲಿ ಸಾರ್ವಜನಿಕ ಟೆಂಡರ್‌ನ್ನು ಕರೆಯಲಾಗಿತ್ತು ಅಂದರೆ ಈ ಟೆಂಡರ್‌ಗೆ ಇದರಲ್ಲಿ ಮೆ॥ ಯೂನಿಟೆಕ್ ಲಿ. ನವದೆಹಲಿ ಇವರೊಬ್ಬರು ಮಾತ್ರ ತಾಂತ್ರಿಕ ಅರ್ಹತೆಯನ್ನು ಹೊಂದಿದ್ದು ಒಂದೇ ಸಂಸ್ಥೆ ಭಾಗವಹಿಸಿದ್ದರಿಂದ ಹಾಗೂ ತಾಂತ್ರಿಕ ಕಾರಣಗಳಿಂದಾಗಿ ಟೆಂಡರ್ ಪ್ರಕ್ರಿಯೆಯನ್ನು ದಿನಾಂಕ: 22.10.2007ರಂದು ನಿರರ್ಥಕಗೊಳಿಸಿ ರದ್ದುಪಡಿಸಲಾಯಿತು. ಎರಡನೇ ಬಾರಿ ಕರೆಯಲಾದ ಟೆಂಡರ್‌ನಲ್ಲಿ ಮೆ॥ ಎಸ್.ಪಿ.ಎಂ.ಎಲ್. ಜೊತೆಗೆ ಎಲ್.ಎಂ.ಜೆ. ಇಂಟರ್ ನ್ಯಾಷನಲ್ ಲಿ. ಮತ್ತು ಝಡ್ ಸಿಸಿಎಲ್ ಜೊತೆಗೆ ಜಿ.ವಿ.ಪಿ.ಆರ್.ಇ.ಎಲ್. ಎಂಬ ಎರಡು ಸಂಸ್ಥೆಗಳು ಟೆಂಡರ್‌ನಲ್ಲಿ ಭಾಗವಹಿಸಿದ್ದು ತಾಂತ್ರಿಕ ಅರ್ಹತೆಯಲ್ಲಿ ಒಂದೇ ಸಂಸ್ಥೆ ಭಾಗವಹಿಸಿದ ಕಾರಣ ಸದರಿ ಟೆಂಡರ್‌ನ್ನು ಸಹ ದಿನಾಂಕ: 15.02.2010 ರಂದು ರದ್ದುಪಡಿಸಲಾಯಿತು.

ಬ್ಯಾಟರಾಯನಪುರದಲ್ಲಿ ಕಟ್ಟಿಸಲು ಉದ್ದೇಶಿಲಾಗಿದ್ದ ಮಾರುಕಟ್ಟೆ ಸಂಕೀರ್ಣದ ಅಭಿವೃದ್ಧಿಗೆ ಸಾಕಷ್ಟು ಸಂಸ್ಥೆಗಳು ಭಾಗವಹಿಸದಿರುವುದರ ಹಿನ್ನೆಲೆಯಲ್ಲಿ ದಿ: 24.04.2010 ರಂದು ಅಂದಿನ ಮಾನ್ಯ ಕೃಷಿ ಮಾರುಕಟ್ಟೆ ಮತ್ತು ಸಕ್ಕರೆ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ತೀರ್ಮಾನಿಸಿದಂತೆ 20 ಎಕರೆ ನಿವೇಶನವನ್ನು ಮಾರುಕಟ್ಟೆ ಸಂಕೀರ್ಣ ನಿರ್ಮಾಣಕ್ಕಾಗಿ ಮತ್ತು 10 ಎಕರೆ ಜಮೀನನ್ನು ವಾಣಿಜ್ಯ ಉಪಯೋಗಕ್ಕಾಗಿ ಬಳಸುವುದಕ್ಕಾಗಿ ಕಾಯ್ದಿರಿಸಲು ತೀರ್ಮಾನಿಸಿದೆ, ಕೆಲವು ಸರ್ಕಾರಿ ಸಂಸ್ಥೆಗಳು ಇದೇ ರೀತಿಯ ಯೋಜನೆಯಲ್ಲಿ ಹೆಚ್ಚಿನ ರಿಯಾಯಿತಿ ಅವಧಿಯನ್ನು ನಿಗದಿಪಡಿಸಿರುವುದನ್ನು ಪರಿಗಣಿಸಿ ಈ ಯೋಜನೆಯಲ್ಲಿಯೂ ಅವಧಿಯನ್ನು 30 ವರ್ಷಗಳಿಂದ 60 ವರ್ಷಗಳಿಗೆ ವಿಸ್ತರಿಸಲು ತೀರ್ಮಾನಿಸಿದೆ.

ಅದರಂತೆ ಮಾರುಕಟ್ಟೆ ನಿರ್ಮಿಸಲು ಇರುವ ಜಾಗದಲ್ಲಿ 20 ಎಕರೆ ಜಮೀನನ್ನು ಮಾರುಕಟ್ಟೆ ಸಂಕೀರ್ಣ ನಿರ್ಮಾಣಕ್ಕಾಗಿ ಮತ್ತು 10 ಎಕರೆ ಜಮೀನನ್ನು ವಾಣಿಜ್ಯ ಉಪಯೋಗಕ್ಕಾಗಿ ಬಳಸಲು ತೀರ್ಮಾನಿಸಿ, ಯೋಜನೆಯಲ್ಲಿ ಹೆಚ್ಚಿನ ರಿಯಾಯಿತಿ ಅವಧಿಯನ್ನು 30 ವರ್ಷಗಳಿಂದ 60 ವರ್ಷಗಳಿಗೆ ವಿಸ್ತರಿಸಲು ತೀರ್ಮಾನಿಸಿ ಯೋಜನೆಯಲ್ಲಿ 3 ಬ್ಲಾಕ್‌ಗಳಲ್ಲಿ 436 ಅಂಗಡಿಗಳು, 20 ಮೀಟರ್ ಅಗಲದ ಕಾಂಕ್ರೀಟ್ ರಸ್ತೆ, ಶೀತಲಗೃಹ ನಿರ್ಮಾಣ, ವರ್ಗೀಕರಣ, ವಿಂಗಡಣೆ ಮತ್ತು ಪೂರಕ ಚಟುವಟಿಕೆಗಳಿಗಾಗಿ ಸೌಲಭ್ಯಗಳನ್ನು ನೀಡುವುದು. ಮಾರುಕಟ್ಟೆ ಸಮಿತಿಯ ಆಡಳಿತ ಕಛೇರಿ, ಬ್ಯಾಂಕ್, ವಿಶ್ರಾಂತಿ ಗೃಹ ಮುಂತಾದ ಸೌಲಭ್ಯಗಳಿಗಾಗಿ ಎರಡು ಮಹಡಿಗಳ ಕಟ್ಟಡವನ್ನು ಹಾಗೂ ಬಾಡಿಗೆ ಮೇಲೆ ನೀಡುವ ಸಲುವಾಗಿ ಹೆಚ್ಚುವರಿ ಕಛೇರಿ ಜಾಗವನ್ನು ನಿರ್ಮಿಸುವುದು ಹಾಗೂ ನೆಲಮಾಳಿಗೆಯಲ್ಲಿ ವಾಹನಗಳ ನಿಲುಗಡೆ ಸೌಲಭ್ಯವನ್ನು ಒದಗಿಸುವುದು. ಟೆಂಡರ್ ದಾಖಲೆಯಲ್ಲಿ

ಪ್ರತಿಯೊಂದು ಸೌಲಭ್ಯಕ್ಕೆ ಗುರುತಿಸಲಾದ ನಿರ್ದಿಷ್ಟ ವಿಸ್ತೀರ್ಣ ಮತ್ತು ಕಟ್ಟಡ ನಿರ್ಮಾಣದ ನಿರ್ದಿಷ್ಟ ಗುಣಮಟ್ಟವನ್ನು ನಿಗದಿಪಡಿಸಲು ತೀರ್ಮಾನಿಸಿ 3ನೇ ಬಾರಿಗೆ ದಿನಾಂಕ: 20.08.2010 ರಂದು ಟೆಂಡರ್ ಕರೆಯಲಾಯಿತು.

ಸಾರ್ವಜನಿಕ ಖಾಸಗಿ ಸಹಭಾಗಿತ್ವದಲ್ಲಿ (ಪಿ.ಪಿ.ಪಿ) ಆಧುನಿಕ ಮಾರುಕಟ್ಟೆ ನಿರ್ಮಿಸುವ ಕುರಿತು ಟೆಂಡರ್ ಕರೆದು ಟೆಂಡರ್‌ನಲ್ಲಿ ಭಾಗವಹಿಸಿದ ಸಂಸ್ಥೆಗಳ ತಾಂತ್ರಿಕ ಬಿಡ್‌ನ್ನು ಮೌಲ್ಯಮಾಪನ ಮಾಡಲು ಟೆಂಡರ್ ಪರಿಶೀಲನ ಉಪ ಸಮಿತಿಯನ್ನು ರಚಿಸುವಂತೆ ಮೇಲೆ (1) ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು ಕೃಷಿ ಮಾರಾಟ ಇಲಾಖೆ ಇವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದರು.

ಮೇಲೆ (2) ರಲ್ಲಿ ಓದಲಾದ ಸರ್ಕಾರದ ಪತ್ರದಲ್ಲಿ ನಿರ್ದೇಶಕರು ಕೃಷಿ ಮಾರಾಟ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ರಾಜ್ಯ ಲೆಕ್ಕ ಪತ್ರ ಇಲಾಖೆ, ಪ್ರಧಾನ ವಾಸ್ತುಶಿಲ್ಪಿ ಕರ್ನಾಟಕ ಸರ್ಕಾರ, ಮೂಲಸೌಲಭ್ಯ ಇಲಾಖೆಯ ಪ್ರತಿನಿಧಿ ಮತ್ತಿತರರನ್ನು ಒಳಗೊಂಡ ಒಂದು ಟೆಂಡರ್ ಮೌಲ್ಯಮಾಪನ ಸಮಿತಿಯನ್ನು ದಿನಾಂಕ: 04.11.2010 ರಂದು ರಚಿಸಲಾಗಿತ್ತು.

ಟೆಂಡರ್ ಮೌಲ್ಯಮಾಪನ ಸಮಿತಿಯು ದಿನಾಂಕ: 13.12.2010 ರಂದು ತೀರ್ಮಾನಿಸಿದಂತೆ ಹಾಗೂ ಮೆ॥ ಐಡೆಕ್ ಸಂಸ್ಥೆಯಿಂದ ತಾಂತ್ರಿಕ ಮಾಹಿತಿಯನ್ನು ಮೌಲ್ಯಮಾಪನ ಮಾಡಿಸಿ ಟೆಂಡರ್‌ನಲ್ಲಿ ಭಾಗವಹಿಸಿದ 4 ಸಂಸ್ಥೆಗಳಲ್ಲಿ ಮೆ॥ ಟ್ರ್ಯೂ ಫ್ಯಾಬ್ ಇಂಜಿನಿಯರ್ಸ್ ಲಿ. ಸಂಸ್ಥೆಯನ್ನು ಹೊರತುಪಡಿಸಿ ಉಳಿದ 3 ಸಂಸ್ಥೆಗಳಾದ ಮೆ॥ ಕೋಸ್ಟಲ್ ಪ್ರಾಜೆಕ್ಟ್ಸ್ ಲಿ. ಮೆ॥ ಶೋಭಾ ಡೆವಲಪರ್ಸ್ ಲಿ., ಮೆ॥ ಆಕೃತಿ ಸಿಟಿ ಲಿ. ಇವರುಗಳು ಯೋಜನಾ ವರದಿಯಲ್ಲಿನ ಷರತ್ತುಗಳನ್ನು ಪೂರೈಸಿರುವುದರಿಂದ ಅರ್ಹರಾಗಿರುವುದಾಗಿ ಮೇಲೆ(3) ರಲ್ಲಿ ಓದಲಾದ ನಿರ್ದೇಶಕರು ಕೃಷಿ ಮಾರಾಟ ಇಲಾಖೆ ಬೆಂಗಳೂರು ಇವರ ಪತ್ರದಲ್ಲಿ ಸರ್ಕಾರಕ್ಕೆ ವರದಿ ಮಾಡಿರುತ್ತಾರೆ.

ಸರ್ಕಾರದ ಪ್ರಧಾನ ಕಾರ್ಯದರ್ಶಿ ಸಹಕಾರ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ದಿನಾಂಕ: 04.01.2011 ರಂದು ನಡೆದ ಸಭೆಯಲ್ಲಿ ಐಡೆಕ್ ಸಂಸ್ಥೆಯು ನೀಡಿದ ವರದಿಯ ಮೇರೆಗೆ ತಾಂತ್ರಿಕ ಬಿಡ್‌ನಲ್ಲಿ ಅರ್ಹತೆ ಗಳಿಸಿದ್ದ ಮೂರು ಸಂಸ್ಥೆಗಳ ಆರ್ಥಿಕ ಬಿಡ್‌ನ್ನು ತೆರೆಯಲು ತೀರ್ಮಾನಿಸಿ ಸಾರ್ವಜನಿಕ ಮತ್ತು ಖಾಸಗಿ ಸಹಭಾಗಿತ್ವದಲ್ಲಿ ನಿರ್ಮಿಸಲು ಉದ್ದೇಶಿಸಿರುವ ಆಧುನಿಕ ಮಾರುಕಟ್ಟೆಯ ನಕ್ಷೆ, ಸ್ಥಳದ ವಿಸ್ತೀರ್ಣ ಇವುಗಳನ್ನು ಪರಿಶೀಲಿಸಿ ಕಟ್ಟಡದಲ್ಲಿ ಗಾರ್ಬೇಜ್ ವಿಲೇವಾರಿ, ಮಳೆ ನೀರು ಕೊಯ್ಲು (Rain water Harvesting), ಸೋಲಾರ್ ಉಪಕರಣಗಳನ್ನು ಅಳವಡಿಸುವುದು ಹಾಗೂ ಮಾರುಕಟ್ಟೆಯಲ್ಲಿ ವಾಹನಗಳ ಸುಲಲಿತ ಸಂಚಾರಕ್ಕೆ ವ್ಯವಸ್ಥೆ ಕಲ್ಪಿಸುವುದು, ಅಂಗಡಿ ಪ್ಲಾಟ್ ಫಾರಂಗಳನ್ನು ಉದ್ದಗಲಕ್ಕೂ ನಿರ್ಮಿಸುವುದು, ಕಾಂಕ್ರೀಟ್ ರಸ್ತೆಗಳನ್ನು ನಿರ್ಮಿಸುವುದು, ಕಟ್ಟಡದಲ್ಲಿ ಟೊಳ್ಳು ಇಟ್ಟಿಗೆಗಳನ್ನು (Hollow Bricks) ಬಳಸುವುದು, ಕಟ್ಟಡದ ಮೊದಲನೇ ಮಹಡಿಯಲ್ಲಿ ಕಛೇರಿಯ ಕಟ್ಟಡಕ್ಕೆ ಅವಕಾಶ ಕಲ್ಪಿಸಿ ಉಳಿದ ಭಾಗವನ್ನು ವಾಣಿಜ್ಯ ಉದ್ದೇಶದಿಂದ ಬಾಡಿಗೆ ನೀಡುವುದು. ಮಾರುಕಟ್ಟೆಯಲ್ಲಿ ಮುಖ್ಯವಾಗಿ ರೈತರಿಗೆ ಅವಶ್ಯವಿರುವ ಎಲ್ಲಾ ತರಹದ ಸೌಕರ್ಯಗಳನ್ನು ಕಲ್ಪಿಸುವುದು ಮತ್ತು ಸಾಧ್ಯವಿದ್ದಲ್ಲಿ ಇಲಾಖೆಯ ಸಲುವಾಗಿ ಒಂದು ಗೆಸ್ಟ್ ಹೌಸ್ ನಿರ್ಮಿಸಲು ಯೋಜನೆಯನ್ನು ಸಿದ್ಧಪಡಿಸಿ ರಾಜ್ಯ ಮಟ್ಟದ ಏಕ ಗವಾಕ್ಷಿ ಪರಿಶೀಲನಾ ಸಮಿತಿ ಮುಂದೆ ಮಂಡಿಸಿ ನಂತರ ಸಚಿವ ಸಂಪುಟದ ಮುಂದೆ ಮಂಡಿಸಲು ತೀರ್ಮಾನಿಸಲಾಯಿತು.

ಮೇಲೆ(5) ರಲ್ಲಿ ಓದಲಾದ ಪತ್ರದಲ್ಲಿ ದಿನಾಂಕ: 20.01.2011 ರಂದು ಯೋಜನೆಯ ಆರ್ಥಿಕ ಬಿಡ್ ತೆರೆದು ಸಮಿತಿಯು ನಡವಳಿಯನ್ನು ಸರ್ಕಾರಕ್ಕೆ ಸಲ್ಲಿಸಿದೆ ಹಾಗೂ ಮೇಲೆ(6) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ನಿರ್ದೇಶಕರು ಕೃಷಿ ಮಾರಾಟ ಇಲಾಖೆ ಪಿಪಿಪಿ ಸೆಲ್ ಮೂಲಭೂತ ಸೌಲಭ್ಯ ಅಭಿವೃದ್ಧಿ ಇಲಾಖೆ, ಕಾರ್ಯಕಾರಿ ನಿರ್ದೇಶಕರು ಕರ್ನಾಟಕ ರಾಜ್ಯ ಇಂಡಸ್ಟ್ರೀಯಲ್ ಇನ್‌ವೆಸ್ಟ್‌ಮೆಂಟ್ ಡೆವಲಪ್‌ಮೆಂಟ್ ಕಾರ್ಪೋರೇಷನ್, ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಐಡೆಕ್ ಮತ್ತು ಸರ್ಕಾರದ ಉಪ ಕಾರ್ಯದರ್ಶಿ (ಬಿ&ಆರ್), ಆರ್ಥಿಕ ಇಲಾಖೆ ಇವರನ್ನು ಒಳಗೊಂಡ ಆರ್ಥಿಕ ಬಿಡ್ ಪರಿಶೀಲನಾ ಸಮಿತಿಯನ್ನು ರಚಿಸಲಾಗಿತ್ತು. ದಿನಾಂಕ: 03.03.2011 ರಂದು ನಡೆದ ಸದರಿ ಆರ್ಥಿಕ ಬಿಡ್ ಪರಿಶೀಲನ ಸಮಿತಿ ಸಭೆಯಲ್ಲಿ ತೀರ್ಮಾನಿಸಿದಂತೆ ಪ್ರತಿ 3 ತಿಂಗಳಿಗೆ ರೂ. 2.6 ಕೋಟಿ ನೀಡಲು ಒಪ್ಪಿರುವ ಮೆ॥ ಶೋಭಾ ಡೆವಲಪರ್ಸ್ ಲಿ. ಮೂವರು ಬಿಡ್ಡುದಾರರಲ್ಲಿ ಅತೀ ಹೆಚ್ಚು ಬಿಡ್ಡು ಮಾಡಿರುವುದರಿಂದ, ಈ ಸಂಸ್ಥೆಗೆ ರಿಯಾಯಿತಿ ಅವಧಿಯನ್ನು 60 ವರ್ಷಗಳಿಗೆ ನೀಡಲು ತೀರ್ಮಾನಿಸಿತು ಹಾಗೂ ಸದರಿ ಸಂಸ್ಥೆಯ ಬಿಡ್ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಲಾಭದಾಯಕವಾಗುವುದರಿಂದ ಇವರನ್ನು Preferred Bidder ಆಗಿ ಪರಿಗಣಿಸಿ ಯೋಜನೆಯನ್ನು ಈ ಸಂಸ್ಥೆಗೆ ವಹಿಸಲು ತೀರ್ಮಾನಿಸಿದೆ.

ಉದ್ದೇಶಿತ ಪ್ರಸ್ತಾವನೆಗೆ ಸಂಬಂಧಿಸಿದಂತೆ ಆರ್ಥಿಕ ಇಲಾಖೆಯ ಮತ್ತು ಮೂಲಭೂತ ಸೌಕರ್ಯಗಳ ಅಭಿವೃದ್ಧಿ ಇಲಾಖೆಯ ಅಭಿಪ್ರಾಯವನ್ನು ಪಡೆದ ನಂತರ ಬ್ಯಾಟರಾಯನಪುರದಲ್ಲಿ ಆಧುನಿಕ ಕೃಷಿ ಉತ್ಪನ್ನ ಮಾರುಕಟ್ಟೆ ಸಂಕೀರ್ಣವನ್ನು ಸಾರ್ವಜನಿಕ ಖಾಸಗಿ ಸಹಭಾಗಿತ್ವದಲ್ಲಿ ಅಭಿವೃದ್ಧಿಪಡಿಸಲು ಪ್ರಸ್ತಾವನೆಯನ್ನು ಸಚಿವ ಸಂಪುಟದ ಅನುಮೋದನೆಗೆ ಮಂಡಿಸಲಾಯಿತು ಹಾಗೂ ದಿನಾಂಕ: 31.12.2011 ರ ಸಚಿವ ಸಂಪುಟ ಸಭೆಯಲ್ಲಿ ಪ್ರಸ್ತಾವನೆಗೆ ಸಚಿವ ಸಂಪುಟವು ಅನುಮೋದನೆ ನೀಡಿರುತ್ತದೆ. ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಈ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಇ 322 ಎಂಆರ್‌ಇ 2010, ಬೆಂಗಳೂರು, ದಿನಾಂಕ: 20–01–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಹಣ್ಣು ಮತ್ತು ತರಕಾರಿ (ವಿಶೇಷ) ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಬಿನ್ನಿಪೇಟೆ, ಬೆಂಗಳೂರು ಇವರ ಒಡೆತನದ ಬ್ಯಾಟರಾಯನಪುರ ಉಪ ಮಾರುಕಟ್ಟೆಯಲ್ಲಿರುವ ಒಟ್ಟು 30 ಎಕರೆ ವಿಸ್ತೀರ್ಣದಲ್ಲಿ ಸಾರ್ವಜನಿಕ ಖಾಸಗಿ ಸಹಭಾಗಿತ್ವ (ಪಿ.ಪಿ.ಪಿ.) ಯೋಜನೆಯಡಿ ಆಧುನಿಕ ಕೃಷಿ ಉತ್ಪನ್ನ ಮಾರುಕಟ್ಟೆಯನ್ನು ನಿರ್ಮಿಸುವ ಯೋಜನೆಗೆ ಈ ಕೆಳಕಂಡ ಅಂಶಗಳ ಬಗ್ಗೆ ಸರ್ಕಾರದ ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗಿದೆ.

1. ಕೃಷಿ ಮಾರಾಟ ಇಲಾಖೆಯ ಬೆಂಗಳೂರಿನ ವಿಶೇಷ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯು ಪ್ರಸ್ತಾಪಿಸಿರುವಂತೆ ತಾನು ಹೊಂದಿರುವ ಜಮೀನಿನ 20 ಎಕರೆ ಪ್ರದೇಶದಲ್ಲಿ ಕೃಷಿ ಉತ್ಪನ್ನ ಮಾರುಕಟ್ಟೆ ನಿರ್ಮಾಣ ಮತ್ತು ಸಂಬಂಧಿಸಿದ ಪ್ರಾಧಿಕಾರಗಳು ಕಟ್ಟಡದ ಎತ್ತರ ಮತ್ತು ಇತರ ವಿಷಯಗಳಿಗೆ ಸಂಬಂಧಿಸಿದಂತೆ ಅನುಮತಿಸುವ ಮಿತಿಗೊಳಪಟ್ಟು 10 ಎಕರೆ ಪ್ರದೇಶದಲ್ಲಿ ವಾಣಿಜ್ಯ ಸಂಕೀರ್ಣವನ್ನು ಒಳಗೊಂಡಿರುವಂತೆ ಬ್ಯಾಟರಾಯನಪುರದಲ್ಲಿ ಆಧುನಿಕ ಕೃಷಿ ಉತ್ಪನ್ನ ಮಾರುಕಟ್ಟೆ ಸಂಕೀರ್ಣವನ್ನು ಅಭಿವೃದ್ಧಿಪಡಿಸುವುದು.
2. ಈ ಸಂಬಂಧ ಕರ್ನಾಟಕ ಪಾರದರ್ಶಕ ಕಾಯ್ದೆ 1999ರನ್ವಯ ಇ–ಟೆಂಡರ್ ಪದ್ಧತಿಯ ಮೂಲಕ ಕರೆಯಲಾದ ಟೆಂಡರ್‌ನಂತೆ ರೂ. 106.30 ಕೋಟಿ ವೆಚ್ಚದಲ್ಲಿ 20 ಎಕರೆ ಪ್ರದೇಶದಲ್ಲಿ ಮಾರುಕಟ್ಟೆ ಸಂಕೀರ್ಣವನ್ನು ನಿರ್ಮಿಸುವ ಮತ್ತು ಉಚಿತವಾಗಿ ಈ ಸಂಕೀರ್ಣವನ್ನು ಮಾರುಕಟ್ಟೆ ಸಮಿತಿಗೆ ಹಸ್ತಾಂತರಿಸುವುದರ ಜೊತೆಗೆ 60 ವರ್ಷಗಳವರೆಗೆ ತ್ರೈಮಾಸಿಕ ರೂ. 2.60 ಕೋಟಿ ರಿಯಾಯಿತಿ ಹಣವನ್ನು ವಾರ್ಷಿಕ ಶೇ. 3 ರ

ಹೆಚ್ಚಳದೊಂದಿಗೆ ಪಾವತಿ ಮಾಡುವ ಕುರಿತು ಅತಿ ಹೆಚ್ಚು ರಿಯಾಯಿತಿ ದರವನ್ನು ನಮೂದಿಸಿರುವ ಮೆ॥ ಶೋಭಾ ಡೆವಲಪರ್ಸ್ ಲಿ., ಇವರನ್ನು ಆಯ್ಕೆಯಾದ ಬಿಡ್‌ದಾರರೆಂದು ಘೋಷಿಸುವುದು.

3. ಯಶಸ್ವಿ ಬಿಡ್‌ದಾರರು ಒಪ್ಪಂದದ ಅವಧಿ ಮುಗಿದ ಕೂಡಲೇ ವಾಣಿಜ್ಯ ಉದ್ದೇಶಕ್ಕಾಗಿ ಅಭಿವೃದ್ಧಿಪಡಿಸಿದ ಸ್ಥಳದಲ್ಲಿರುವ ಕಟ್ಟಡ ಹಾಗೂ ಅದರಲ್ಲಿರುವ ಎಲ್ಲಾ ಸೌಲಭ್ಯಗಳನ್ನು ಸುಸ್ಥಿತಿಯಲ್ಲಿ ಮಾರುಕಟ್ಟೆ ಸಮಿತಿಗೆ ಹಿಂತಿರುಗಿಸುವುದು.
4. ಮಾರುಕಟ್ಟೆ ಸಮಿತಿಯು ಒಪ್ಪಂದದ ಸಂಪೂರ್ಣ ಅವಧಿಯಲ್ಲಿ ಪೂರ್ಣ ನಿವೇಶನದ ಮಾಲೀಕತ್ವದ ಹಕ್ಕನ್ನು ಹೊಂದಿರುತ್ತದೆ ಮತ್ತು ಅಭಿವೃದ್ಧಿದಾರರು ಸದರಿ ನಿವೇಶನದ ಮೇಲೆ ಯಾವುದೇ ಹಕ್ಕು ಪ್ರತಿಪಾದಿಸತಕ್ಕದ್ದಲ್ಲ.
5. ಈ ಯೋಜನೆಯ ಅನುಷ್ಠಾನಕ್ಕಾಗಿ ರಾಜ್ಯ ಸರ್ಕಾರದಿಂದ ಯಾವುದೇ ಅನುದಾನ, ಸಹಾಯಧನ ಬ್ಯಾಂಕ್ ಗ್ಯಾರಂಟಿ, ನೀಡುವುದಿಲ್ಲ.
6. ಕಾರ್ಯದರ್ಶಿ ಹಣ್ಣು ಮತ್ತು ತರಕಾರಿ (ವಿಶೇಷ) ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಬಿನ್ನಿಪೇಟೆ, ಬೆಂಗಳೂರು ಇವರು ನಿರ್ದೇಶಕರು ಕೃಷಿ ಮಾರಾಟ ಇಲಾಖೆ ಬೆಂಗಳೂರು ಇವರ ಮಾರ್ಗದರ್ಶನದಲ್ಲಿ ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ ಮತ್ತು ಅಭಿವೃದ್ಧಿ) ಕಾಯ್ದೆ 1966 ರಲ್ಲಿನ ಅವಕಾಶದ ರೀತ್ಯ ಕ್ರಮ ಜರುಗಿಸಿ ಯೋಜನೆಯ ಯಶಸ್ವಿ ಬಿಡ್‌ದಾರರಾದ ಮೆ॥ ಶೋಭಾ ಡೆವಲಪರ್ಸ್ ಲಿ. ಇವರೊಂದಿಗೆ ಕರಾರು ಒಪ್ಪಂದ ಮಾಡಿಕೊಂಡು (Project Development and Implimention Agreement (PDIA), ಸಹಿ ಪಡೆಯತಕ್ಕದ್ದು.
7. ಯೋಜನೆಯ ಅನುಷ್ಠಾನ ಪ್ರಗತಿಯ ಬಗ್ಗೆ ನಿರ್ದೇಶಕರು ಕೃಷಿ ಮಾರಾಟ ಇಲಾಖೆ ಬೆಂಗಳೂರು ಇವರು ಕಾಲಕಾಲಕ್ಕೆ ಪರಿಶೀಲಿಸಿ ಕಾಲಮಿತಿಯೊಳಗೆ ಯೋಜನೆ ಅನುಷ್ಠಾನಗೊಳಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ.ಕೆ. ವಾಸುದೇವ ಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಹಕಾರ ಇಲಾಖೆ

450

## ಸಹಕಾರ ಸಚಿವಾಲಯ

**ವಿಷಯ :** ಮಹಿಳಾ ಸಮಾಜ ಕಸ್ತೂರಿಬಾ ಶಿಶುವಿಹಾರ (ರಿ). ದೊಡ್ಡಬಳ್ಳಾಪುರ ಈ ಸಂಸ್ಥೆಗೆ ನೇಮಕ ಮಾಡಿರುವ ಆಡಳಿತಾಧಿಕಾರಿಗಳ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಸಇ 156 ಸಸಂನೋ 2010 ದಿನಾಂಕ: 13/01/2011 ಹಾಗೂ 12/9/2011
2) ಆಡಳಿತಾಧಿಕಾರಿಗಳು, ಮಹಿಳಾ ಸಮಾಜ ಕಸ್ತೂರಿಬಾ ಶಿಶುವಿಹಾರ (ರಿ), ದೊಡ್ಡಬಳ್ಳಾಪುರ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರ ಪತ್ರ ದಿನಾಂಕ 30/12/2011

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ: 13/01/2011 ರ ಆದೇಶದಲ್ಲಿ, ಮಹಿಳಾ ಸಮಾಜ ಕಸ್ತೂರಿಬಾ ಶಿಶುವಿಹಾರ (ರಿ), ದೊಡ್ಡಬಳ್ಳಾಪುರ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಈ ಸಂಸ್ಥೆಯ ಆಡಳಿತ ಮಂಡಳಿಯ ಅವಧಿಯು ಮುಗಿದಿದ್ದು ಹಾಗೂ ಸಂಘದ ಆಡಳಿತ ಮಂಡಳಿಯು ನೂತನ ಆಡಳಿತ ಸಮಿತಿಯನ್ನು ಕಾನೂನು ಬದ್ಧವಾಗಿ ಚುನಾವಣೆ ನಡೆಸಿ ರಚಿಸುವಲ್ಲಿ ವಿಫಲವಾಗಿರುವುದು ದೃಢಪಟ್ಟಿರುವುದರಿಂದ, ಈ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 27ಎ ರಡಿಯಲ್ಲಿ ಶಿಶು ಅಭಿವೃದ್ಧಿ ಯೋಜನಾಧಿಕಾರಿ, ದೊಡ್ಡಬಳ್ಳಾಪುರ ಇವರನ್ನು ಸಂಸ್ಥೆಯ ಆಡಳಿತ ವ್ಯವಹಾರಗಳನ್ನು ನಿರ್ವಹಿಸಲು ಆಡಳಿತಗಾರರನ್ನಾಗಿ 06 ತಿಂಗಳ ಅವಧಿಗೆ ಅಥವಾ ಸದರಿ ಸಂಸ್ಥೆಗೆ ಕಾನೂನು ಬದ್ಧವಾಗಿ ಚುನಾವಣೆ ನಡೆಸಿ, ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ನೇಮಿಸಿ, ಆಡಳಿತಾಧಿಕಾರಿಗಳು ಸಂಘಗಳ ನೋಂದಣಿ ಅಧಿನಿಯಮ 1960, ಸಂಘಗಳ ನೋಂದಣಿ ನಿಯಮಗಳು/ಸಂಘಗಳ ನಿಬಂಧನೆಗಳ ಅವಕಾಶಗಳನ್ನು ಗಮನಿಸಿ ಸಂಘದ ಆಡಳಿತ ಸಮಿತಿಗೆ ಚುನಾವಣೆ ನಡೆಸಿ, ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆ ಆದೇಶಿಸಲಾಗಿತ್ತು. ದಿನಾಂಕ 12/09/2011ರ ಸರ್ಕಾರಿ ಆದೇಶದಲ್ಲಿ ಆಡಳಿತಾಧಿಕಾರಿಯ ಅವಧಿಯನ್ನು ದಿನಾಂಕ 9/7/2011ರಿಂದ 6 ತಿಂಗಳ ಅವಧಿಗೆ ವಿಸ್ತರಿಸಿದೆ.

ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಆಡಳಿತಾಧಿಕಾರಿಗಳು, ಮಹಿಳಾ ಸಮಾಜ ಕಸ್ತೂರಿಬಾ ಶಿಶುವಿಹಾರ (ರಿ), ದೊಡ್ಡಬಳ್ಳಾಪುರ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಇವರು ಸದರಿ ಮಹಿಳಾ ಸಮಾಜಕ್ಕೆ ಚುನಾವಣೆ ನಡೆಸಲು ದಿನಾಂಕ 2/12/2011 ರಲ್ಲಿ ಚಾಲ್ತಿಯಲ್ಲಿರುವ ಸದಸ್ಯರ ತಾತ್ಕಾಲಿಕ ಪಟ್ಟಿಯನ್ನು ಪ್ರಕಟಿಸಲಾಗಿದ್ದು ಸದರಿ ಪ್ರಕಟಣೆಗೆ ಸಂಬಂಧಿಸಿದಂತೆ ಹೆಸರು ಬಿಟ್ಟು ಹೋಗಿರುವುದಕ್ಕೆ ಹಾಗೂ ಪ್ರಕಟಿಸಿರುವ ಸದಸ್ಯರ ಪಟ್ಟಿಯನ್ನು ಆಕ್ಷೇಪಿಸಿ ಪರಿಶೀಲಿಸುವಂತೆ ಕೋರಿ ಸಲ್ಲಿಸಲಾದ ಆಕ್ಷೇಪಣೆಗಳ ಬಗ್ಗೆ ತೀರ್ಮಾನ ಕೈಗೊಂಡು ಅಂತಿಮ ಪಟ್ಟಿ ತಯಾರಿಸಲು ಈಗಾಗಲೇ ಸಹಾಯಕ ನಿಬಂಧಕರು ದೊಡ್ಡಬಳ್ಳಾಪುರ ಇವರ ಮಾರ್ಗದರ್ಶನ ನೀಡುವಂತೆ ಕೋರಲಾಗಿದೆ. ಆದ್ದರಿಂದ ಅಂತಿಮ ಪಟ್ಟಿಯನ್ನು ಪ್ರಕಟಿಸಿ ಕಾರ್ಯಕಾರಿ ಸಮಿತಿಗೆ ಚುನಾವಣೆ ನಡೆಸಲು ಸಮಯಾವಕಾಶ ಅಗತ್ಯವಿರುವುದರಿಂದ ನೀಡಲಾದ ಗಡುವನ್ನು ಇನ್ನೂ 2 ತಿಂಗಳ ಕಾಲ ಮುಂದೂಡಿ ಕಾರ್ಯಕಾರಿ ಸಮಿತಿಯನ್ನು ಚುನಾಯಿಸಲು ಅವಕಾಶ ಮಾಡಿಕೊಡಬೇಕೆಂದು ಕೋರಿರುತ್ತಾರೆ.

ಆಡಳಿತಾಧಿಕಾರಿಗಳು ಸರ್ಕಾರಕ್ಕೆ ಬರೆದಿರುವ ಪತ್ರವನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು ಆಡಳಿತಾಧಿಕಾರಿಗಳ ಅವಧಿಯನ್ನು ವಿಸ್ತರಿಸಲು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಇ 117 ಸಸಂನೋ 2011, ಬೆಂಗಳೂರು, ದಿನಾಂಕ: 21ನೇ ಜನವರಿ, 2012**

**ಮೇಲೆ** ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಮಹಿಳಾ ಸಮಾಜ ಕಸ್ತೂರಿಬಾ ಶಿಶುವಿಹಾರ (ರಿ), ದೊಡ್ಡಬಳ್ಳಾಪುರ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಈ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27(ಎ) ರನ್ವಯ ಸರ್ಕಾರಕ್ಕೆ ಪ್ರದತ್ತವಾದ

ಅಧಿಕಾರವನ್ನು ಚಲಾಯಿಸಿ, ಆಡಳಿತಾಧಿಕಾರಿಯಾಗಿ ನೇಮಕವಾಗಿರುವ ಶಿಶು ಅಭಿವೃದ್ಧಿ ಯೋಜನಾಧಿಕಾರಿ, ದೊಡ್ಡಬಳ್ಳಾಪುರ ಇವರ ಆಡಳಿತಾಧಿಕಾರಿ ಅವಧಿಯನ್ನು ದಿನಾಂಕ: 09/01/2012 ರಿಂದ ಮುಂದಿನ ಎರಡು (02) ತಿಂಗಳ ಹೆಚ್ಚುವರಿ ಅವಧಿಗೆ ವಿಸ್ತರಿಸಿ ಆದೇಶಿಸಿದೆ.

ಆಡಳಿತಾಧಿಕಾರಿಗಳು ಸದರಿ ಅವಧಿಯಲ್ಲಿ ಚುನಾವಣೆ ಪ್ರಕ್ರಿಯೆ ಪೂರ್ಣಗೊಳಿಸಿ, ಹೊಸ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎಸ್. ವಿಶ್ವೇಶ್ವರಯ್ಯ**
451 ಸರ್ಕಾರದ ಅಧೀನ ಕಾರ್ಯದರ್ಶಿ-2
ಸಹಕಾರ ಇಲಾಖೆ

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** ಶ್ರೀಮತಿ ಎಸ್. ಸುಜಾತ, ಅಪರ ಸರ್ಕಾರಿ ವಕೀಲರು ಇವರ ಸೇವಾವಧಿಯನ್ನು ಮುಂದುವರೆಸುವ ಬಗ್ಗೆ.-

**ಓದಲಾಗಿದೆ :** 4) ಸರ್ಕಾರಿ ಆದೇಶ ಸಂಖ್ಯೆ: ಲಾ 128 ಎಲ್ಎಜಿ 2010, ದಿನಾಂಕ 25-09-2010
5) ಅಡ್ವೋಕೇಟ್ ಜನರಲ್‌ರವರ ಅರೆ ಸರ್ಕಾರಿ ಪತ್ರ ಸಂಖ್ಯೆ: 204/AG/EST/2011-12 ದಿನಾಂಕ 13-09-2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರ.ಸಂ. (1)ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಉಚ್ಚ ನ್ಯಾಯಾಲಯದ ಅಡ್ವೋಕೇಟ್ ಜನರಲ್‌ರವರ ಕಚೇರಿ, ಬೆಂಗಳೂರು ಇಲ್ಲಿ ಒಂದು ಅಪರ ಸರ್ಕಾರಿ ವಕೀಲರ ಹುದ್ದೆಯನ್ನು ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಸೃಜಿಸಿ ಸದರಿ ಹುದ್ದೆಗೆ ಶ್ರೀಮತಿ ಎಸ್. ಸುಜಾತ, ವಕೀಲರು, ಮನೆ ನಂ. 230, 17ನೇ 'ಸಿ' ಕ್ರಾಸ್, 3ನೇ ಬ್ಲಾಕ್, 4ನೇ ಸ್ಟೇಜ್, ಬಸವೇಶ್ವರ ನಗರ, ಬೆಂಗಳೂರು-5600079, ಇವರನ್ನು ಕರ್ನಾಟಕ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮಗಳು, 1977ರ ನಿಯಮ 23ರಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಹುದ್ದೆಯ ಕಾರ್ಯಭಾರ ವಹಿಸಿಕೊಳ್ಳುವ ದಿನಾಂಕದಿಂದ ತಾತ್ಕಾಲಿಕವಾಗಿ ಒಂದು ವರ್ಷದ ಅವಧಿಗೆ ನೇಮಿಸಲಾಗಿತ್ತು. ತದನಂತರ ಕ್ರ.ಸಂ. (2) ಅಡ್ವೋಕೇಟ್ ಜನರಲ್‌ರವರ ಅರೆ ಸರ್ಕಾರಿ ಪತ್ರದಲ್ಲಿ ಕೋರಿರುವಂತೆ ಸದರಿ ವಕೀಲರ ನೇಮಕಾತಿ ಅವಧಿಯು ದಿನಾಂಕ 27-09-2011ರಂದು ಮುಕ್ತಾಯವಾಗುವ ಹಿನ್ನೆಲೆಯಲ್ಲಿ ಮತ್ತೊಂದು ಅವಧಿಗೆ ಮುಂದುವರೆಸುವಂತೆ ಕೋರಲಾಗಿರುತ್ತದೆ.

ಈ ಹಿನ್ನೆಲೆಯಲ್ಲಿ ಪರಿಶೀಲಿಸಿ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಲಾ 174 ಎಲ್ಎಜಿ 2011, ಬೆಂಗಳೂರು, ದಿನಾಂಕ 27-01-2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀಮತಿ ಎಸ್. ಸುಜಾತ, ಅಪರ ಸರ್ಕಾರಿ ವಕೀಲರು ಇವರನ್ನು ಕರ್ನಾಟಕ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮಗಳು, 1977ರ ನಿಯಮ 23ರಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ದಿನಾಂಕ 28-09-2011ರಿಂದ ಮತ್ತೊಂದು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಕರ್ನಾಟಕ ಉಚ್ಚ ನ್ಯಾಯಾಲಯದ ಅಡ್ವೋಕೇಟ್ ಜನರಲ್ ಕಚೇರಿಯ ಅಪರ ಸರ್ಕಾರಿ ವಕೀಲರ ಹುದ್ದೆಯಲ್ಲಿ ಮುಂದುವರೆಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 512 ವೆಚ್ಚ-10/2011, ದಿನಾಂಕ 06-01-2012ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಡಿ. ಎ. ಗೌರೀಶ**
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-1)
ಪಿ.ಆರ್. 452 ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಕೊಳ್ಳೇಗಾಲ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆಯನ್ನು ಅಂದಾಜು ರೂ. 7290.00 ಲಕ್ಷಗಳಲ್ಲಿ ಕಲ್ಪಿಸಲು ಆಡಳಿತಾತ್ಮಕ ಅನುಮೋದನೆ ನೀಡುವ ಕುರಿತು.-

**ಓದಲಾಗಿದೆ :** ವ್ಯ.ನಿ., ಕನನೀಸಒಚಮಂಡಳಿರವರ ಪತ್ರ ಸಂಖ್ಯೆ: ಕಜಮಂ/ತಾಂತ್ರಿಕ/ಕೊಳ್ಳೇಗಾಲ-ಒ.ಚ.ಯೋ01/1050/2010-11, ದಿನಾಂಕ 07-07-2010.

**ಪ್ರಸ್ತಾವನೆ :**

ಕೊಳ್ಳೇಗಾಲ ಪಟ್ಟಣವು ಚಾಮರಾಜನಗರ ಜಿಲ್ಲೆಯ ತಾಲ್ಲೂಕು ಕೇಂದ್ರವಾಗಿದ್ದು, ಈ ಪಟ್ಟಣದ ಜನಸಂಖ್ಯೆಯು 2001ರ ಜನಗಣತಿಯ ಪ್ರಕಾರ 52,607 ಇದ್ದು, ಪ್ರಸ್ತುತ ಸುಮಾರು 60,000 ಜನಸಂಖ್ಯೆ ಇರುತ್ತದೆ. ಕೊಳ್ಳೇಗಾಲ ಪಟ್ಟಣಕ್ಕೆ ಕಾವೇರಿ ನದಿಯಿಂದ 1970ರಲ್ಲಿ ಕಾರ್ಯಗತಗೊಳಿಸಲಾದ 1.0 ಎಂ.ಜಿ.ಡಿ. ಕುಡಿಯುವ ನೀರು ಸರಬರಾಜು ಯೋಜನೆಯಿಂದ ಹಾಗೂ 2006ರಲ್ಲಿ ಕಾರ್ಯಗತಗೊಳಿಸಲಾದ 13.50 ಎಂ.ಎಲ್.ಡಿ., ಕುಡಿಯುವ ನೀರು ಸರಬರಾಜುಯೋಜನೆಯಿಂದ ತಲಾ ದಿನಂಪ್ರತಿ 100 ಲೀ.ನಂತೆ ನೀರು ಸರಬರಾಜು ಮಾಡಲಾಗುತ್ತಿದೆ.

ಕೊಳ್ಳೇಗಾಲ ಪಟ್ಟಣದ ಕೆಲವು ಭಾಗಗಳಲ್ಲಿ ಒಳಚರಂಡಿ ವ್ಯವಸ್ಥೆ ಇದ್ದು (21,425 ಕಿ.ಮಿ> ಉದ್ದದ ಒಳಚರಂಡಿ ಕೊಳವೆ ಮಾರ್ಗ) ಪಟ್ಟಣದ ನೈರ್ಮಲ್ಯತೆಯನ್ನು ಕಾಪಾಡುವ ದೃಷ್ಟಿಯಿಂದ ಪಟ್ಟಣದ ಎಲ್ಲಾ ಭಾಗಗಳಿಗೂ ಒಳಚರಂಡಿ ವ್ಯವಸ್ಥೆಯನ್ನು ಕಲ್ಪಿಸಲು ಯೋಜನೆಯನ್ನು ರೂಪಿಸಲಾಗಿದೆ. ಪ್ರಸ್ತುತ ಒಳಚರಂಡಿ ಯೋಜನೆಯನ್ನು 2027ರಲ್ಲಿ ಅಂದಾಜಿಸಲಾದ ಮಧ್ಯಂತರ ಅವಧಿಯ 80,078ಕ್ಕೆ ಜನಸಂಖ್ಯೆಗೆ ಮತ್ತು 2042ರಲ್ಲಿ ಅಂದಾಜಿಸಲಾದ ಅಂತಿಮ ಅವಧಿಯ 1,02,203 ಜನಸಂಖ್ಯೆ ಎಂದು ಪರಿಗಣಿಸಿ ದಿನಂಪ್ರತಿ ತಲಾ 110 ಲೀ ತ್ಯಾಜ್ಯ ನೀರನ್ನು ಅಂದಾಜಿಸಿ ಯೋಜನೆ ವಿನ್ಯಾಸಿಸಲಾಗಿದೆ.

ಪಟ್ಟಣವನ್ನು 4 ವಲಯಗಳನ್ನಾಗಿ ವಿಂಗಡಿಸಿ ಅಂತರಿಕ ಕೊಳವೆ ಮಾರ್ಗಗಳಿಗೆ ಸ್ಟೋನ್‌ವೇರ್ ಕೊಳವೆಗಳು, ಆರ್.ಸಿ.ಸಿ. ಕೊಳವೆಗಳು ಹಾಗೂ ಯು.ಪಿ.ವಿ.ಸಿ. (SDR) ಕೊಳವೆಗಳನ್ನು ಅಳವಡಿಸಲು ಹಾಗೂ ಇಟ್ಟಿಗೆ ಹಾಗೂ ಆರ್.ಸಿ.ಸಿ. ಅಳುಗುಂಡಿಗಳನ್ನು ನಿರ್ಮಿಸಲು ಉದ್ದೇಶಿಸಲಾಗಿದೆ. ವಿನ್ಯಾಸದ ಪ್ರಕಾರ ವೆಟ್‌ವೆಲ್‌ಗಳನ್ನು ನಿರ್ಮಿಸಲು ಹಾಗೂ 4.5 ಎಂ.ಎಲ್.ಡಿ., ಸಾಮರ್ಥ್ಯದ SBR technology ಅಳವಡಿಸಿಕೊಂಡು ಮೇಲಿನ ನೀರು ಶುದ್ಧೀಕರಣ ಘಟಕವನ್ನು ನಿರ್ಮಿಸಲು ಉದ್ದೇಶಿಸಿದೆ.

ಮೇಲ್ಕಂಡ ಅಂದಾಜನ್ನು 2009–10ನೇ ಸಾಲಿನ ಮಂಡಳಿ ಹಾಗೂ ಮೈಸೂರು ವೃತ್ತದ ಲೋಕೋಪಯೋಗಿ ಬಂದರು ಹಾಗೂ ಒಳನಾಡು ಸಾರಿಗೆ ಇಲಾಖೆಯ ದರಪಟ್ಟಿಯನ್ವಯ ರೂ. 7290.00 ಲಕ್ಷಗಳಿಗೆ ಅಂದಾಜಿಸಿ ವ್ಯವಸ್ಥಾಪಕ ನಿರ್ದೇಶಕರು, ಕನನೀಸ ಮತ್ತು ಒಚ ಮಂಡಳಿಯವರು ಈ ಕೆಳಕಂಡ ಆರ್ಥಿಕ ಮಾದರಿಯಲ್ಲಿ ಯೋಜನೆಯನ್ನು ಕೈಗೆತ್ತಿಕೊಳ್ಳಲು ಆಡಳಿತಾತ್ಮಕ ಅನುಮೋದನೆ ಕೋರಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

| | |
|---|---|
| ಆರ್ಥಿಕ ಸಂಸ್ಥೆಗಳಿಂದ ಸಾಲ (50%) | ರೂ. 3645.00 ಲಕ್ಷಗಳು |
| ಸರ್ಕಾರದ ಸಾಲ (25%) | ರೂ. 1822.50 ಲಕ್ಷಗಳು |
| ಸ್ಥಳೀಯ ಸಂಸ್ಥೆಯ ವಂತಿಗೆ (25%) | ರೂ. 1822.50 ಲಕ್ಷಗಳು |
| ಒಟ್ಟು | ರೂ. 7290.00 ಲಕ್ಷಗಳು |

ಆದರೆ, ಪ್ರಸ್ತುತ ಸರ್ಕಾರವು ಹಾಲಿ ಜಾರಿಯಲ್ಲಿರುವ ಒಳಚರಂಡಿ ಯೋಜನೆಗಳ ಆರ್ಥಿಕ ಮಾದರಿಯು ಸರ್ಕಾರದ ಸಾಲದಿಂದ ಮತ್ತು ಹಣಕಾಸು ಸಂಸ್ಥೆಗಳಿಂದ ಸಾಲ ಹಾಗೂ ಸ್ಥಳೀಯ ಸಂಸ್ಥೆಗಳ ವಂತಿಕೆಯಿಂದ ಯೋಜನೆಯ ಅಂದಾಜನ್ನು ಬರಿಸಲಾಗುತ್ತಿದ್ದು, ಸದರಿ ಸ್ಥಳೀಯ ಸಂಸ್ಥೆಗಳಲ್ಲಿನ ನಾಗರೀಕರ ಹಿತದೃಷ್ಟಿಯಿಂದ, ಪರಿಸರ ಸಂರಕ್ಷಣೆ ಹಿತದಲ್ಲಿ ಮತ್ತು ಮಲಿನ ನೀರು ನದಿಗಳನ್ನು/ಅಂತರ್ಜಲ ನೀರನ್ನು ಕಲುಷಿತಗೊಳಿಸದಿರುವ ದೃಷ್ಟಿಯಿಂದ ಎಲ್ಲಾ ಸ್ಥಳೀಯ ಸಂಸ್ಥೆಗಳಲ್ಲಿ ಒಳಚರಂಡಿ ಯೋಜನೆಗಳನ್ನು ಕಲ್ಪಿಸುವ ದೃಷ್ಟಿಯಿಂದ ಮತ್ತು ಸ್ಥಳೀಯ ಸಂಸ್ಥೆಗಳು ಆರ್ಥಿಕವಾಗಿ ಸಬಲವಿಲ್ಲದ ಕಾರಣ ಈ ಯೋಜನೆಗಳ ಪ್ರಯೋಜನವನ್ನು ಪಡೆಯುವುದರಿಂದ ವಂಚಿತರಾಗುವುದನ್ನು ತಡೆಯಲು ಒಳಚರಂಡಿ ಯೋಜನೆಯ ಆರ್ಥಿಕ ಮಾದರಿಯನ್ನು ಸರ್ಕಾರದ ಆದೇಶ ಸಂಖ್ಯೆ: ನಅಇ 07 ಯುಡಬ್ಲ್ಯೂಎಸ್ 201, ದಿನಾಂಕ 20–07–2011 ರಿಂದ ಜಾರಿಗೆ ಬರುವಂತೆ ಪರಿಷ್ಕರಿಸಿ, ಆದೇಶಿಸಿರುತ್ತದೆ. ಸದರಿ ಆದೇಶದನ್ವಯ ಕೊಳ್ಳೇಗಾಲ ನಗರ ಸಭೆಯಾಗಿದ್ದು, ಈ ಯೋಜನೆಯ ಆರ್ಥಿಕ ಮಾದರಿಯನ್ನು ಈ ಕೆಳಕಂಡಂತೆ ನಿಗದಿಗೊಳಿಸಬೇಕಾಗಿರುತ್ತದೆ.

| | |
|---|---|
| ಕರ್ನಾಟಕ ಸರ್ಕಾರದ ಅನುದಾನ (70%) | ರೂ. 5103.00 ಲಕ್ಷಗಳು |
| ಆರ್ಥಿಕ ಸಂಸ್ಥೆಗಳಿಂದ ಸಾಲ (20%) | ರೂ. 1458.00 ಲಕ್ಷಗಳು |
| ಸ್ಥಳೀಯ ಸಂಸ್ಥೆಯ ವಂತಿಕೆ (10%) | ರೂ. 729.00 ಲಕ್ಷಗಳು |
| ಒಟ್ಟು | ರೂ. 7290.00 ಲಕ್ಷಗಳು |

ಈ ಯೋಜನೆಯನ್ನು 2011–12ನೇ ಸಾಲಿನ ಅನುಮೋದಿತ ಪರಿಷ್ಕೃತ ಕ್ರಿಯಾ ಯೋಜನೆಯಲ್ಲಿ ಸೇರಿಸಿ ಪ್ರಸ್ತುತ ಸಾಲಿನಲ್ಲಿ ರೂ. 2430.00 ಲಕ್ಷಗಳನ್ನು ಅನುವು ಮಾಡಲಾಗಿದೆ.

ಸರ್ಕಾರವು ಯೋಜನೆಯ ಅಂದಾಜಿನಲ್ಲಿ ವಿದಿಸಲಾಗುತ್ತಿರುವ ಇಟಿಪಿ, ದರಗಳನ್ನು ಶೇಕಡ 10ಕ್ಕೆ ಮಿತಿಗೊಳಿಸಲು ನಿರ್ದರಿಸುವ ಹಿನ್ನಲೆಯಲ್ಲಿ ಹಾಗೂ ಯೋಜನೆಯಡಿ ಉದ್ಭವಿಸಬಹುದಾದ ಟೆಂಡರ್ ಪ್ರೀಮಿಯಮ್ ಮತ್ತು ಎಸ್ಕಲೇಶನ್ ದರಗಳನ್ನು ಸ್ಥಳೀಯ ಸಂಸ್ಥೆಯೇ ಬರಿಸಬೇಕಾಗಿರುವುದರಿಂದ ಸದರಿ ಮೊತ್ತಗಳನ್ನು ಅಂದಾಜು ಪಟ್ಟಿಯಿಂದ ಹೊರತು ಪಡಿಸಲು ತೀರ್ಮಾನಿಸಿದೆ. ಅದರಂತೆ ಯೋಜನೆಯ ಅಂದಾಜು ವೆಚ್ಚದಲ್ಲಿ ಮೂಲ ಅಂದಾಜು ಮೊತ್ತವಾದ ರೂ. 5469.44 ಲಕ್ಷಗಳಿಗೆ ಶೇಕಡ 10ರಷ್ಟು ಇಟಿಪಿ ದರಗಳನ್ನು ಅಂದರೆ ರೂ 546.94 ಲಕ್ಷಗಳು ಮತ್ತು ಇತರೆ ವಚ್ಚಗಳಾದ ರೂ. 0.62 ಲಕ್ಷಗಳನ್ನು ಸೇರಿಸಿ ಯೋಜನೆಯ ಅಂದಾಜು ಮೊತ್ತವನ್ನು ರೂ. 6017.00 ಲಕ್ಷಗಳಿಗೆ ಮಿತಿಗೊಳಿಸಬೇಕಾಗಿದೆ.

ಸರ್ಕಾರವು ಮಂಡಳಿಯ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 05 ಯುಡಿಎಸ್ 2010, ಬೆಂಗಳೂರು, ದಿನಾಂಕ 24–01–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕೊಳ್ಳೇಗಾಲ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆಯನ್ನು ಅಂದಾಜು ರೂ. 6017.00 ಲಕ್ಷಗಳಲ್ಲಿ (ರೂ. ಆರು ಸಾವಿರದ ಹದಿನೇಳು ಲಕ್ಷಗಳು ಮಾತ್ರ) ಕಲ್ಪಿಸುವ ಯೋಜನೆಯನ್ನು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ಕೈಗೆತ್ತಿಕೊಳ್ಳಲು ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗೊಳಪಟ್ಟು ಸರ್ಕಾರದ ಆಡಳಿತಾತ್ಮಕ ಅನುಮೋದನೆಯನ್ನು ನೀಡಿದೆ.

1) The Escalation charges should not form part of the estimate. It should be borne by the concerned ULB. The estimate is reduced to such extent.
2) ETP/Contingencies are limited to 10% of the project cost
3) The board shall invite the tender immediately after the handing over of the land required under the scheme in order to avoid time and cost run over.
4) The consent of the ULB shall be obtained to meet the extra cost that might occur due to deviations, extra item works or variations in the scheme.
5) Adequate provision to be made by the Board in the following years for timely completion of the Project.
6) Water rates as proposed by KUWS & DB have to be implemented to meet O & M cost of UGD.
7) KTPP provisions, quality control and timely completion should be ensured
8) ಅಂದಾಜು ಪರಿಷ್ಕರಣೆಗೆ ಯಾವುದೇ ಅವಕಾಶ ನೀಡತಕ್ಕದ್ದಲ್ಲ

ಈ ಅದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: FD 665 Exp-9/2010, ದಿನಾಂಕ 05–10–2010ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ. ಎಂ. ವಾಸುದೇವರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ

ನಗರಾಭಿವೃದ್ಧಿ ಇಲಾಖೆ

ಪಿ.ಆರ್. 453